# ಅ ರ್ಪ ಣೆ



ಆಳಿಗೆ ಆಕಾರಾಕೊಟ್ಟು
ಬಾಳನ್ನು ಬಡುಕೊಳ್ಳುವಂತೆ ಮಾಡದ,
ಅವ್ವ – ಬಾಳಕಕ್ಕಗೆ

## ಲೇಖಕನ ಮಾತು

ಕನ್ನಡದಲ್ಲಿ ಹಾಸ್ಯಕತೆಗಳು ಕಡಿಮೆ. ಆ ದಿಸೆಯಲ್ಲಿ ಬರೆದ ಕೃತಿಗಳೇ ಈ 'ಪ್ರೇತ ಸಂಹಾರ.' ಇವುಗಳಲ್ಲಿ ಕೆಲವು ಹರಟೆಗಳು, ಕೆಲವು ಹಾಸ್ಯ ಕತೆಗಳು. ಸುತ್ತಮುತ್ತಣ ವ್ಯಕ್ತಿಗಳನ್ನು ನನ್ನ ದೃಷ್ಟಿಯಿಂದ ನೋಡಿ, ಅದಕ್ಕೆ ಬಣ್ಣಬಳಿದು ನೋಡಿದಾಗ ನಗು ಬಂತು, ಅದನ್ನೇ ಕತೆಯನ್ನಾಗಿ ಮಾಡಿ ಓದಿದಾಗ ಮತ್ತೂ ಹೆಚ್ಚು ನಗು ಬಂತು. ನಾನೊಬ್ಬನೇ ನಕ್ಕರೆ ಹೇಗೆ? ನೀವೂ ನಗಲೆಂದು ಎಲ್ಲವನ್ನೂ ಸೇರಿಸಿ ಕೊಟ್ಟಿದ್ದೇನೆ. ಇದರಲ್ಲಿನ ಕತೆಗಳಲ್ಲಿನ ಅನೇಕ ಸಂಗತಿಗಳು ನಡೆದವೇ. ನಡೆದ ಸಂಗತಿಯನ್ನು ಹಾಗೇ ಬರೆದರೆ ಅದು ಪತ್ರಿಕೆಯ ವರದಿಯಂತಾಗಿ ಬಿಡುತ್ತದೆ. ನಡೆದ ಪ್ರಸಂಗಗಳಿಗೆ ಕಥೆಯ ರೂಪುಕೊಟ್ಟಾಗ ಓದು ವವರಿಗೆ ರುಚಿಸುತ್ತದೆ. ತಿಳಿಹಾಸ್ಯದೊಡನೆ ಬೆರೆತಾಗ ಅದು ಇನ್ನೂ ರುಚಿ ಯಾಗಿರುತ್ತದೆ.

ಈ ಕತೆಗಳನ್ನು ಪುಸ್ತಕರೂಪದಲ್ಲಿ ನಿಮ್ಮ ಮುಂದೆ ಇಡುವುದಕ್ಕೆ ಕಾರಣರು 'ದೀಕ್ಷಿತ್ ಅಂಡ್ ಕೋ' ರವರು. ಅವರ ಸಹಾಯವಿಲ್ಲದೆ ಇದು ಬೆಳಕು ಕಾಣುತ್ತಿರಲಿಲ್ಲ. ಒಂದಲ್ಲ ಹತ್ತುರೀತಿಯಿಂದ ಈ ಸಂಗ್ರಹ ಹೊರಬರಲು ಕಾರಣರಾದ ಶ್ರೀ ಅ.ನ. ಕೃಷ್ಣರಾಯರಿಗೆ ನಾನು ಚಿರಋಣಿ. ಅವರ ಉಪಕಾರ ಮರೆಯುವಂಥದಲ್ಲ. ಮತ್ತೆ ಹಲವು ರೀತಿಯಿಂದ ನೆರ ವಾದ ಸಮಸ್ತ ಗೆಳೆಯರಿಗೆ ನನ್ನ ವಂದನೆಗಳು. ಬಹು ಬೇಗ ಮುದ್ದಾಗಿ ಮುದ್ರಿಸಿ ಈಸ್ಟರ್ನ್ ಪ್ರೆಸ್ ಮಾಲೀಕರಾದ ಶ್ರೀ ಎಂ. ಎಸ್. ಚಿಂತಾಮಣಿ ಯವರು ವಂದನಾರ್ಹರು.

ಬೆಂಗಳೂರು,
೧-೪-೧೯೫೭

**ಜಿ. ದಾಶರಥಿ ದೀಕ್ಷಿತ್**

# ಮು ನ್ನು ಡಿ

ದಾಶರಥಿ ದೀಕ್ಷಿತರು ಕನ್ನಡಿಗರಿಗೆ ಹೊಸಬರಲ್ಲ. ಆಗಾಗ್ಗೆ ಇವರ ಕಥೆ, ಹರಟೆ ಕನ್ನಡ ಮಾಸಪತ್ರಿಕೆ, ವಾರಪತ್ರಿಕೆಗಳಲ್ಲಿ ಬರುತ್ತಿವೆ. ಏರ್‌ಕ್ರ್ಯಾಫ್ಟ್ ಫ್ಯಾಕ್ಟರಿಯಲ್ಲಿ ಕೆಲಸ. ದುಡಿಮೆಯ ಜೀವನಕ್ಕೆ ನಗೆ, ರಸಿಕತೆ ಬೇಕೆಂದು ನಂಬುವವರು ದಾಶರಥಿ. ಸಾಹಿತ್ಯೋಪಾಸನೆಯನ್ನು ಪ್ರೀತಿಯಿಂದ, ನಿರಾಡಂಬರದಿಂದ, ಗೆಲುವಿನಿಂದ ಮಾಡುತ್ತಿರುವವರಲ್ಲಿ ಒಬ್ಬರು.

ತಾವು ಸಂಗ್ರಹಿಸಿ ಪ್ರಕಟಿಸಲಿರುವ ಕಥೆ, ಹರಟೆಗಳ ಸಂಗ್ರಹಕ್ಕೆ ನಾನೊಂದು ಮುನ್ನುಡಿ ಬರೆದುಕೊಡಬೇಕೆಂದು ಕೇಳಿದರು. 'ನನ್ನಿಂದ ಮುನ್ನುಡಿ ಬರೆಸುವ ಅಭಿಲಾಷೆಯನ್ನು ಬಿಟ್ಟುಬಿಡಿ' ಎಂದು ನಾನು ಒತ್ತಿಯೊತ್ತಿ ಹೇಳಿದೆ. ಅವರ ಹಟ - ಅದಕ್ಕೂ ಹೆಚ್ಚಾದ ಅಕೃತ್ರಿಮ ಪ್ರೇಮಕ್ಕೆ ನಾನು ಸೋಲಬೇಕಾಯಿತು.

ವರ್ಧಿಷ್ಣುವಾದ ಸಾಹಿತಿಯ ಒಂದು ಕೃತಿಯ ಬಗ್ಗೆ ನಾಲ್ಕು ಒಳ್ಳೆಯ ಮಾತು ಬರೆಯುವುದಕ್ಕೆ ನಾನು ಹಿಂದೆಗೆಯುವುದಿಲ್ಲ—ಯಾರೂ ಹಿಂದೆಗೆಯಬಾರದು. ಆದರೆ ಕೆಲವು ದಿನಗಳ ಹಿಂದೆ ಆದ ಒಂದು ಅನುಭವದಿಂದ ನಾನು ಹಿಂದೆಗೆದರೆ ಒಳ್ಳೆಯದೇನೋ ಅನಿಸಿತು. ಮತ್ತೊಬ್ಬ ಗೆಳೆಯರು ಹೀಗೇ ಒತ್ತಾಯಮಾಡಿ ಒಂದು ಮುನ್ನುಡಿ ನನ್ನಿಂದ ಬರೆಸಿಕೊಂಡರು. ಅವರ ಗ್ರಂಥ ನೋಡಿದ ಪ್ರಸಿದ್ಧ ಸಾಹಿತಿಗಳು ಹೇಳಿದರಂತೆ 'ನಿಮ್ಮ ಗ್ರಂಥ ನಾನು ಓದಿಲ್ಲ' – 'ಏಕೆ' ಎಂದು ಗೆಳೆಯರು ಕೇಳಿದರು. ಸಾಹಿತಿಗಳು ಅಪ್ಪಣೆ ಕೊಡಿಸಿದರು – 'ಅ.ನ.ಕೃ. ಮುನ್ನುಡಿ ಬರೆದಿದ್ದಾರೆ – ಆದ್ದರಿಂದ!' ಕನ್ನಡದಲ್ಲಿ ಪ್ರಕಟವಾಗುವ ಪುಸ್ತಕಗಳನ್ನು ಓದದಿರುವಂತೆ ನನ್ನ ಮುನ್ನುಡಿ ಬೆದರಿಸುವುದಾದರೆ, ಅದನ್ನು ಬರೆಯುವ ಗೋಜೇ ಬೇಡ' ಎಂದು ನಿರ್ಧರಿಸಿದೆ. ನನ್ನಿಂದ ಇತರರಿಗೆ ಉಪಕಾರವಾಗದಿದ್ದರೂ ಚಿಂತೆಯಿಲ್ಲ; ತೊಂದರೆಯಾಗುವುದು ಬೇಡ.

ಆದರೆ ಸಂಕುಚಿತ ಮನಸ್ಕರೂ, ಪಕ್ಷ ಪ್ರತಿಪಕ್ಷಗಳ ಹೋರಾಟದಲ್ಲಿ ಸಾಹಿತ್ಯಪ್ರಗತಿಗೆ ಪ್ರತಿಬಂಧಕ ತರುವವರೂ ಆದ ಇಂಥ ಕೆಲವು ಸಾಹಿತಿ

ಗಳ ಹುಲುನುಡಿಗೆ ನಾನು ಒಂದು ಪವಿತ್ರಕರ್ತವ್ಯವನ್ನು ತೋರೆಯುವುದೇ? ಕನ್ನಡದಲ್ಲಿ ಗ್ರಂಥರಚನೆ ಮಾಡಲು ನಾನು ಆರಂಭಿಸಿದ ದಿನಗಳನ್ನು ಜ್ಞಾಪಿಸಿಕೊಂಡೆ. ವಯಸ್ಸು, ಅನುಭವ, ಪಾಂಡಿತ್ಯ ಒಂದೂ ಇಲ್ಲ – ಆದರೆ ಬರೆಯಬೇಕೆಂಬ ಉತ್ಕಟ ಆಸೆ. ಯಾರಾದರೂ ದಾರಿ ತೋರಿ ಯಾರೇ – ಯಾರಾದರೂ ಒಂದು ಒಳ್ಳೆಯ ಮಾತನಾಡಿ ನಾನು ಹುಡುಕಿ ಕೊಂಡ ಮಾರ್ಗ ಮರಳುಗಾಡಿನ ಮಾರ್ಗವಲ್ಲವೆಂದು ಹೇಳಿಯಾರೆ ಎನ್ನುವ ಹಂಬಲ. ಇಲ್ಲ – ಎಲ್ಲಿಯೂ ಬೆಳಕು – ಉತ್ತೇಜನ ದೊರೆಯಲಿಲ್ಲ. ಇಪ್ಪತ್ತೆರಡು ವರ್ಷ ಇಂಥ ನಿರುತ್ಸಾಹ ಪರಿಸ್ಥಿತಿಯನ್ನೆದುರಿಸಿ ನಾನು ನನ್ನ ಸಾಹಿತ್ಯದ ತೇರನ್ನು ನಾಗಿಸಿಕೊಂಡು ಬಂದೆ. ನನ್ನ 'ಹಟಮಾರಿತನ' ವಿಲ್ಲದ ಹಲವರು ಹಿಂದೆ ಬಿದ್ದರು – ಸಾಹಿತ್ಯವನ್ನು ಕೈಬಿಟ್ಟರು. ವರ್ಧಿಷ್ಣು ವಾದ ಸಾಹಿತಿಗೆ ಒಂದು ಸಮಯೋಚಿತ ಸವಿಮಾತು ಆಡುವಷ್ಟು ಔದಾರ್ಯ ನಮ್ಮ ಸಾಹಿತ್ಯ ವರ್ಗದಲ್ಲಿಲ್ಲ. 'ಮಾನಸಿಕ ಆತಿಥ್ಯ' (intellectual hospitility) ಗುಣವನ್ನೇ ನಮ್ಮ ಜನ ಕಳೆದುಕೊಂಡಿದ್ದಾರೆ.

ಇಂದೂ ಇದೇ ಪರಿಸ್ಥಿತಿ. ಉಪಕಾರದ ಬದಲು ಉಪಚಾರ, ವಿಮರ್ಶೆಯ ಬದಲು ಕಟುಟೀಕೆ. ಹಿರಿಯ ಸಾಹಿತಿಗಳಲ್ಲಿ ನಿಸ್ಸೀಮ ಅಹಂಕಾರದಿಂದ ಪ್ರೇರಿತವಾದ ಉಪೇಕ್ಷೆ; ಸಾಹಿತಿಗಳೆಂದು ಹೇಳಿ ಕೊಳ್ಳುವ ಅನಧಿಕಾರಿ ಪತ್ರಿಕಾಲೇಖಕರಲ್ಲಿ ಕಠೋರ ಕಟುಕತನ. ಉಪೇಕ್ಷೆ, ಕಠೋರತನಗಳಿಂದ ಒಂದು ನಾಡಿನ ಸಾಹಿತ್ಯ ಬೆಳೆಯ ಬಲ್ಲುದೇ – ಬದುಕಬಲ್ಲುದೇ?

ನಮ್ಮ ಸಾಹಿತ್ಯ ಪ್ರಪಂಚದ ಸಮಸ್ಯೆಗಳು ನನ್ನ ಮನಸ್ಸನ್ನು ಅಲ್ಲೋಲ ಕಲ್ಲೋಲಮಾಡಿವೆ. ಆದರೆ ಕಿರಿಯ ಸಾಹಿತಿಗಳ ಬಗ್ಗೆ ಒಂದು ಸವಿನುಡಿ ಯಾಡಿ ಅವರ ಅಂತರ್ಗತ ಚೇತನದ ವಿಕಾಸಕ್ಕೆ ನನ್ನ ಅಳಿಲುಸೇವೆ ಯರ್ಪಿಸಬೇಕೆಂಬ ನನ್ನ ನಿರ್ಧಾರಕ್ಕೆ ಚ್ಯುತಿ ಬಂದಿಲ್ಲ. ದಾಶರಥಿ ಕೇಳಿ ದಾಗ ಅನುಮಾನಪಟ್ಟವನು ಸಂತೋಷದಿಂದ 'ಈ ಮುನ್ನುಡಿ' ನುಡಿಯು ತ್ತಿದ್ದೇನೆ.

ಜಗತ್ತೆಲ್ಲ ಒಂದು ನಾಟಕಶಾಲೆ – ಎಂದು ಷೇಕ್ಸ್‌ಪಿಯರ್ ಹೇಳಿದ ಮಾತನ್ನು ಕೈಲಾಸಂ ಅಣಕವಾಡಿ 'ಹೌದು – ಆದರೆ ಸುಸ್ವಾದರೆ ಸುಧಾರಿ

ಸ್ಕೊಳ್ಳೋಕೆ Side wings ಇಲ್ಲ' ಎಂದರು. ಸೂಕ್ಷ್ಮವಾಗಿ ಜೀವನವನು ಅವಲೋಕಿಸಿದರೆ Side wings ಇರುವುದು ಗೊತ್ತಾಗುತ್ತದೆ. ಪ್ರಕೃತಿ ಮಾನವನ ಮೇಲೆ ಹೇರಳವಾದ ಹೊರೆಯನ್ನು ಹೇರಿರುತ್ತದೆ. ಅವನು ದುಃಖಜೀವಿ. ಹೋರಾಟ ಅವನ ಉಸಿರು. ಆದರೆ ಇಷ್ಟೆಲ್ಲ ಜವಾಬ್ದಾರಿಯನ್ನು ಮಾನವನ ಮೇಲೆ ಹೊರೆಸಿದ ಪ್ರಕೃತಿ, ಅದನ್ನು ಹೊರುವ ಶಕ್ತಿಯನ್ನೂ ಅವನಿಗಿತ್ತಿದೆ. ಆ ಶಕ್ತಿಯೇ ನಗೆಗಾರಿಕೆ. ಪ್ರಕೃತಿ ಬಳ್ಳಿಯಿಂದ, ಹೂವಿನಿಂದ, ಮರದಿಂದ, ಹಕ್ಕಿಯ ಹಾಡಿನಿಂದ ನಗಿಸಿ ಮಾನವನಿಗೆ ಮೇಲ್ಪಂಕ್ತಿ ಹಾಕಿಕೊಟ್ಟಿದೆ. ನಗೆಯನ್ನು ಮರೆತವನೇ ದುಃಖಿ – ಅವನೇ ರೋಗಿ. ಅವನ ದುಃಖಕ್ಕೆ, ಅವನ ರೋಗಕ್ಕೆ ಪರಿಹಾರವಿಲ್ಲ, ಚಿಕಿತ್ಸೆಯಿಲ್ಲ.

ಕನ್ನಡದಲ್ಲಿ ನಗೆಗಾರಿಕೆಯನ್ನು ವಿಪುಲವಾಗಿ ಬೆಳಸಿದವರು ಕೈಲಾಸಂ, ಜಾಗೀರದಾರ್, ರಾ. ಶಿ., ನಾಡಿಗೇರ್ ಮೊದಲಾದವರು. ಈ ಸಂತಾನ ನಮ್ಮ ಅದೃಷ್ಟದಿಂದ ಬೆಳೆಯುತ್ತಿದೆ. ದಾಶರಥಿ ನಗೆಯ ಹಾದಿಯನ್ನು ಹಿಡಿದು ನಡೆಯುತ್ತಿದ್ದಾರೆ.

ಈ ಸಂಗ್ರಹದಲ್ಲಿ ಬಂದಿರುವ ಲೇಖನಗಳಲ್ಲಿ ಕೆಲವು ಕಥೆಗಳು, ಕೆಲವು ಹರಟೆಗಳು. ಹರಟೆಯಾಗಲಿ ಕಥೆಯಾಗಲಿ ಅದನ್ನು ಲಲಿತಹಾಸ್ಯ ತನ್ನ ಬಂಧುರಬಾಹುಗಳಲ್ಲಿ ಹಿಡಿದಪ್ಪಿದೆ. ವಿಷ ತಿಂದು ತಿಂದು, ಅದರಿಂದಲೇ ಬೆಳೆದ ನರಸ, ಹೆಂಡತಿ ಅಪಮಾನಮಾಡಿದಳೆಂದು ಆತ್ಮಹತ್ಯ ಮಾಡಿಕೊಳ್ಳಲು ಹೊರಟು, ಸಾಧ್ಯವಾಗದೆ ಆರು ಜನ ಮಕ್ಕಳ ತಂದೆಯಾದ ಮಹನೀಯ, ಲಲಿತೆ ಊರಿಗೆ ಒಂದು ದಿನ ಹೋದರೆ ಆಕೆಯ (ಹಾಗೂ ತನ್ನ) ಮಕ್ಕಳನ್ನು ಸಾಕಲು ಪಾಡುಪಡುವ ಲಲಿತಾರಮಣ, ಅವಸ್ಥೆಪಟ್ಟು ರಜೆಪಡೆದು ಮಡದಿಯ ಮುಖಾರವಿಂದ ದರ್ಶನಕ್ಕೆ ಹೋಗಿ ಅವಳು ಹೊರಗಾಗಿರುವುದನ್ನು ಕೇಳಿ ಸೋತುಬಿದ್ದ ಶಾಮಣ್ಣ, ಬೀಗರು ಮನೆಯಲ್ಲಿ ವ್ಯಾಜ್ಯ ಕಾಯುತ್ತಿದ್ದರೆ ಸುಖವಾಗಿ ಸಿನೀಮಾ ನೋಡುತ್ತ ಕುಳಿತಿದ್ದ ದಂಪತಿಗಳು, ದೇವರು, ದೇವರು ಎಂದುಕೊಂಡು ಮನೆಯ ದೇವರುಗಳನ್ನು ಮಾರಿಕೊಂಡು ಜೀವನ ಮಾಡುತ್ತಿದ್ದ ಆಚಾರಿ, ಯಾರ ಮನೆಯ ಮದುವೆಗೋ ತನ್ನ ಮನೆ ಬಿಟ್ಟುಕೊಟ್ಟು ಅವಸ್ಥೆಪಟ್ಟ ಪ್ರಾಣಿ, ಜರೀ ಪೇಟದ ಮೋಹಕ್ಕೆ ಬಿದ್ದು ಕೆಲಸ ಕಳೆದುಕೊಂಡ ಅಪ್ಪಣ್ಣಯ್ಯಂಗಾರ್,

ಸೌದೆ ಅಭಾವ ಹೋಗಲಾಡಿಸಿಕೊಳ್ಳುವುದಕ್ಕೆ ಹುಡುಗರ ಪಡೆಯಿಂದ ಸುಳ್ಳು ವ್ಯಾಜ್ಯ ಕಾಯಿಸಿ ಸೌದೆ ಸಂಪಾದಿಸಿದ ಮೇಷ್ಟ್ರು, ಎಲ್ಲರನ್ನೂ ಆಡಿಕೊಳ್ಳುತ್ತಿದ್ದು ತಾನು ಅವಸ್ಥೆಗೆ ಸಿಕ್ಕಿಕೊಂಡಾಗ ಹಲ್ಲುಕಿರಿದ ಮೈಕಾನಿಕ್ ಅಪ್ಪಯ್ಯ ಮೊದಲಾದ ಹಲವು ರಸವ್ಯಕ್ತಿಗಳನ್ನು ಸೃಷ್ಟಿಸಿರುವ ಶಕ್ತಿ, ಅವರನ್ನು ಸಾಂತಃಕರಣದಿಂದ ನೋಡಿರುವ ಚೇತನ ಲಕ್ಷ್ಯಾರ್ಹವಾದುದು. ಸೀತೆಯ ಪತ್ರಗಳಲ್ಲಿ ಬಂದಿರುವ ಆಧುನಿಕತೆ, ಶಕುಂತಲಾ ವಿಮರ್ಶೆಯಲ್ಲಿ ಬಂದಿರುವ ವಿಚಿತ್ರನಗೆ ರಸಿಕರನ್ನು ತಲೆದೂಗಿಸದಿರಲಾರದು. ಸಂಗ್ರಹದಲ್ಲಿರುವ ಎಲ್ಲ ಬರೆಹಗಳಲ್ಲಿಯೂ ಒಂದು ಸನ್ನಿವೇಶ, ಒಂದು ಪಾತ್ರ, ಒಂದು ಸಂಭಾಷಣೆಯಾದರೂ ಓದುಗರ ಮನಕ್ಕೆ ಮುದವನ್ನು ನೀಡದಿರದು.

ತಂತ್ರದೃಷ್ಟಿಯಿಂದ, ಭಾಷಾದೃಷ್ಟಿಯಿಂದ ಈ ಸಂಗ್ರಹ ದೋಷಯುತವಾಗಿದೆ. ಅಸ್ಪಷ್ಟತೆ, ಅಸಹಜತೆ ಎಲ್ಲಿಯೂ ತಲೆಹಾಕದಿದ್ದರೂ ಕೆಲವು ಕಡೆ ಸಾಕಷ್ಟು ಬೆಳವಣಿಗೆಯಿಲ್ಲವೆಂದು ನನಗನಿಸುತ್ತದೆ. ಲೇಖನ ಶಿಲ್ಪಕ್ಕೆ ತಕ್ಕ ತೂಕ, ಪ್ರಮಾಣ, ಸಮತೋಲನೆಗಳನ್ನೊದಗಿಸುವುದಕ್ಕೆ ಅನುಭವದ ಭದ್ರ ಬುನಾದಿ ಬೇಕು. ಲೇಖಕನ ಲಕ್ಷ್ಯ ಅತ್ತಕಡೆಗಿದೆಯೋ ಇಲ್ಲವೋ ಎಂದು ವಿಮರ್ಶಕ ಯೋಚಿಸಬೇಕು. ದಾಶರಥಿಯವರಲ್ಲಿ ಆ ಲಕ್ಷ್ಯವೂ ಇದೆ – ಅದನ್ನು ಸಾಧಿಸಬೇಕೆಂಬ ಪರಮ ಶ್ರದ್ಧೆಯೂ ಇದೆ.

ಕನ್ನಡ ಜನ ಓದಿ, ಸುಖಿಸಿ ಕೆಲಕಾಲವಾದರೂ ನಕ್ಕು ನಲಿಯಬಲ್ಲ ಸಂಗ್ರಹ 'ಪ್ರೇತ ಸಂಹಾರ'ವೆಂದು ಧಾರಾಳವಾಗಿ ಹೇಳಬಲ್ಲೆ. ದಾಶರಥಿ ದೀಕ್ಷಿತರು ಇಂತಹ – ಇದಕ್ಕೂ ಉತ್ತಮವಾದ ಹಲವು ಸಂಗ್ರಹಗಳನ್ನು – ನಗೆಬರಹಗಳನ್ನಿತ್ತು ನಮ್ಮ ನಾಡನ್ನು ನಗಿಸಲಿ – ನಲಿಸಲಿ. ಅದಕ್ಕಿಂತಲೂ ಹೆಚ್ಚಿನ ಸಾಹಿತ್ಯಸೇವೆ – ನಾಡಸೇವೆ ಬೇಕೇ ?

'ಅನ್ನಪೂರ್ಣ', ವಿಶ್ವೇಶ್ವರಪುರಂ,
ಬೆಂಗಳೂರು ನಗರ
೭–೪–೧೯೪೭

ಅ. ನ. ಕೃಷ್ಣರಾಯ

# ಸರ್ವಭಕ್ಷಕ



ನರಸ........ಮೂರೂಕಾಲಿಂಚು ಒಳಕ್ಕೆ ಹೋದ ಕಣ್ಣುಗಳು, ಅರಪಾವು ನೀರು ಹಿಡಿಸುವಷ್ಟು ಹಳ್ಳಬಿದ್ದ ಕೆನ್ನೆಗಳು, ಚೂಪನೆಯ ಮೂಗು, ಕಂದುಬಣ್ಣದ ದೇಹ, ಕಡ್ಡಿ ಪೈಲ್ವಾನ್, ಹರುಕು ಹಸಿರು ಸ್ವೆಟರ್, ಮಾಸಿದ ಪೈಜಾಮು, ನಿಬಿಡವಾಗಿ ಬೆಳೆದ ತಲೆ, ಇದೇ ಅವನ ತಸ್ವೀರು.

ಯಾವಾಗಲೂ ಗಂಟುಹಾಕಿದ ಮುಸುಡಿ, ಸದಾ ಕೆಮ್ಮುವ ಯಂತ್ರ. ಆಸಾಮಿ ಕಫದ ಕಾರ್ಖಾನೆ. ಬೀಡಿ ಬೇರೆ ಸಾಲದ್ದಕ್ಕೆ–ನಮ್ಮ ಬೀದಿ ಹುಡುಗರು ಇವನಿಗೆ 'ಆರೋಗ್ಯ ಶಾಸ್ತ್ರದ ಮೊದಲನೆ ಪುಟ' ಎಂದು ನಾಮಕರಣ ಮಾಡಿದ್ದರು, ಏಕೆಂದರೆ ಹೈಜಿಯನ್ ಕ್ಲಾಸಿಗೆ ಅಸ್ತಿಪಂಜರದ ಬದಲು ಇವನನ್ನು ಧಾರಾಳವಾಗಿ ಉಪಯೋಗಿಸಬಹುದಾಗಿತ್ತು. ಮತ್ತೆ ಕೆಲವರು "ಬಂಗಾಳಿ ಬೇಬಿ" ಎನ್ನುತ್ತಿದ್ದರು. ಯಾರು ಏನಾದರೂ ಅಂದುಕೊಳ್ಳಲಿ ಅವನಪಾಡಿಗವನು ಹಾಯಾಗಿ ಕೆಮ್ಮಿಕೊಂಡಿದ್ದ. ಇವತ್ತು ನಾಳೆ ಪಾಸಿಯಾಗುವುದೆಂದು ೨೫ ವರ್ಷಗಳವರೆಗೆ ಬದುಕಿ ಬಂದಿದ್ದ ನರಸ.

ಚಿಕ್ಕಂದಿನಲ್ಲೇ ಅಪ್ಪ ಅಮ್ಮ ಇವನನ್ನು ನಡುನೀರಿನಲ್ಲಿ ಕೈಬಿಟ್ಟು ಸ್ವಾಮಿಪಾದ ಸೇರಿದ್ದರು. ತಬ್ಬಲಿ ನರಸನಿಗೆ ಅಕ್ಕ ಪಾರ್ವತಮ್ಮನೇ ದಿಕ್ಕಾದಳು. ಅಕ್ಕ ಅಮ್ಮನಾದಾಳೇ? ಏನೋ ಇದ್ದಾನಲ್ಲಾ ಪ್ರಾಣಿ ಎಂದು ಪಿಂಡ ಹಾಕುತ್ತಿದ್ದಳು. ಪಾರ್ವತಮ್ಮನ ವಿನಹ ಪ್ರಪಂಚದಲ್ಲಿ ಅವನಿಗೆ ಯಾರೂ ಪರಿಚಯವಿದ್ದಂತೆ ತೋರಲಿಲ್ಲ. ಇಷ್ಟರಮೇಲೆ ಇದ್ದರೂ ಪ್ರಖ್ಯಾತ ಪಂಡಿತ ಪರಮಶಿವಯ್ಯನವರು ಗೊತ್ತಿರಬಹುದು, ಯಾಕೆಂದರೆ ಇವರೇ ಅವರ ಫ್ಯಾಮಿಲಿ ಡಾಕ್ಟರು. ಪಾರ್ವತಮ್ಮನ ಹೇಳಿಕೆ ಪ್ರಕಾರ ಚಿಕ್ಕವನಾದಾಗಿನಿಂದ ವರ್ಷ ವರ್ಷವೂ ಮರುಕಳಿಸಿ ಮರುಕಳಿಸಿ ಜ್ವರ ಬಂದು, ಹನ್ನೆರಡು ತಿಂಗಳೂ ಇದ್ದೇ ಇರುತ್ತಿತ್ತಂತೆ. ಕೆಮ್ಮು, ನಿಮೋನಿಯಾ—ಅಸ್ತ್ಮ—ಗೂರಲು ನಾಯಿಕೆಮ್ಮಲುಗಳೆಲ್ಲಾ ಸೇರಿ ಒಂದು ನಮೂನೆ ಹೊಸ ವ್ಯಾಧಿಯೇ ಈ ಪ್ರಾಣಿಯನ್ನು ಆವರಿಸಿದೆ ಎಂದು ಪರಮಶಿವಯ್ಯನವರ ಸಿದ್ಧಾಂತ.

ಪಂಡಿತರು ಅದೇನು ಔಷಧಿಕೊಡುತ್ತಿದ್ದರೋ ಆ ಪರಮೇಶನೇ ಬಲ್ಲ. ದಿನವಹೀ ತಪ್ಪದೇ ಬಂದು ಗುಟಿಕ, ಲೇಹ್ಯ, ಚೂರ್ಣ ಭಸ್ಮಾದಿಗಳನ್ನು ಪಥ್ಯದೊಡನೆ ಹೇಳಿ ನರಸನಿಗೆ ತಿನ್ನುಸುತ್ತಿದ್ದರು. ವರ್ಷಾನುಗಟ್ಟಲೆ ಭಸ್ಮ ತಿಂದರೂ ಅವನ ಖಾಯಿಲೆ ಬೇರೆ ಭಸ್ಮವಾಗಲಿಲ್ಲ. ಅಂತೂ ಪಂಡಿತರೂ ಬೇಸಿರವಿಲ್ಲದೆ ಬಂದು ನೋಡಿಕೊಳ್ಳುತ್ತಿದ್ದರು, ನರಸ ಮಾತ್ರ ಜೀವಶ್ರವವೇ ಆಗಿದ್ದ. ಗುಟಿಕ ಚೂರ್ಣಗಳೆಲ್ಲಾ ಅವನ ಕೆಮ್ಮಿನೊಡನೆ ಕಾದಾಡಿ ಸೋತುಹೋಗಿರಬೇಕೆಂದು ತೋರುತ್ತದೆ. ಆರೋಗ್ಯದಿಂದ ಇರುವುದೇ ನರಸನಿಗೆ ಗೊತ್ತಿಲ್ಲದ ಕಾರಣ ಆ ಕೆಮ್ಮಿ ನರಳುವುದರಲ್ಲೇ ಒಂದು ಆನಂದ ಹೊಂದಲು ಪ್ರಯತ್ನಿಸುತ್ತಿದ್ದ. ಹೀಗಿರುವುದೇ ತನ್ನ ಜೀವನದ ಆದಿ ಅಂತ್ಯವೆಂದು ಅವನು ಹಾಗೇ ನೆಮ್ಮದಿ ಹೊಂದಲು ಹಾತೊರೆಯುತ್ತಿದ್ದ, ಜೀವಕ್ಕೆ ನೆಟ್ಟಗಿಲ್ಲದಮೇಲೆ ಶಾಂತಿ ಎಲ್ಲಿಂದ ಬರಬೇಕು? ಮೂಲೆಯಲ್ಲಿ ಕೂತು ಮಲಗಿ ಹೀಗಾಗಿರಬಹುದು ಕೊಂಚ ಹೊರಗೆ ಹೋಗಿ ತಿರುಗಾಡಲು ಪ್ರಾರಂಭಿಸಿದರೆ ತನ್ನ ಪ್ರಾರಬ್ಧ ಪರಿಹಾರವಾಗಬಹುದೆಂದು ಅವನಿಗೆನ್ನಿಸಿತು.

ಸ್ವಲ್ಪ ವ್ಯೆಯ್ಯಲ್ಲಿ ಹಗುರಾದಂತೆ ಅನ್ನಿಸಿದ್ದರಪ್ರಯುಕ್ತ, ಬೆಚ್ಚಗೆ

ಹಚ್ಚಡಹೊದ್ದು ಹಾಗೇ ಅಡ್ಡಾಡಿಕೊಂಡು ಬರಲು ಸವಾರಿ ಗಾಳಿ ಸಂಚಾರಕ್ಕೆ ಹೊರಟಿತು. ಆ ಸಂಜೆ ಬಲು ಸೊಗಸಾಗಿತ್ತು. ಹಾಗೆ ಹೋಗುತ್ತಾ ಹೋಗುತ್ತಾ ಅದೂ ಇದೂ ನೋಡಿಕೊಳ್ಳುತ್ತಾ ಲಾಲ್‌ಬಾಗ್‌ಕಡೆ ಕಾಲೆಳೆದ. ಅದೇನು ಜನ, ಏನು ತಾನು ಎಂದೆನಿಸಿತು. ಕುಲು ಕುಲ ನಗುತ್ತ ಕೈಯ್ಯಲ್ಲಿ ಕೈ ಹಾಕಿಕೊಂಡಿದ್ದ ಗಂಡಹೆಂಡಿರು ಇವನ ಪಕ್ಕದಲ್ಲೇ ಹಾದು ಹೋದಾಗ ಅದನ್ನ ನೋಡಿ ಕಣ್ಣು ಕಣ್ಣು ಬಿಟ್ಟ. ಜಗತ್ತೇ ಆನಂದದಲ್ಲಿ ಮುಳುಗಿದಂತೆ ತೋರಿತು. ಹತ್ತಾರು ಜನ ಪ್ರೇಮಿಗಳು ಅಲ್ಲಲ್ಲೇ ಕೂತಿದ್ದುದೂ, ಆ ಸಂಜೆ, ಆ ಉದ್ಯಾನದ ಸೊಬಗೂ, ಸಮೀಪದ ಹೋಟಲಿನ ರೇಡಿಯೋ ಸೊಂಪಾಗಿ ಹಾಡುತ್ತಿದ್ದುದೂ ಎಲ್ಲಾ ಸೇರಿ ನರಸನಿಗೆ ತಾನೂ ಹೀಗೆ ಇರಬೇಕೆಂಬ ಬಯಕೆ ತಂದವು. ತನ್ನ ಸ್ಥಿತಿಯಲ್ಲಿ ಹೀಗೆ ಇರಲು ಸಾಧ್ಯವೇ ಇಲ್ಲವೆಂದು ಮರುಗಿದ. ಸಾಯೋತನಕ ಹೀಗೆ ಕೆಮ್ಮಿ ಕೆಮ್ಮಿ ಒಂದು ದಿನ ಹರ ಹರ ಎಂದರೆ ಜನ್ಮ ಸಾರ್ಥಕವಾಯಿತೆ? ಇಲ್ಲ ಎಂದಿಗೂ ಆಗದು ತಾನೂ ಒಂದು ಹೆಣ್ಣಿನ ಜೊತೆಗೂಡಬೇಕು, ಉದ್ಯಾನದಲ್ಲಿ ಕೈಯ್ಯಲ್ಲಿ ಕೈ ಹಾಕಿಕೊಂಡು ಕೇಕೆ ಹಾಕಿ ನಕ್ಕು ನಲಿಯಬೇಕೆಂಬ ಹುಚ್ಚು ಬಯಕೆ ಅವನಲ್ಲಿ ಮನೆಮಾಡಿಕೊಂಡಿತು. ಏನುಮಾಡಬೇಕೆಂದು ಬಹಳ ಚಿಂತಿಸಿದ.

ಇದೇ ಯೋಚನೆಯಲ್ಲಿ ಮನೆ ಸೇರಿದಾಗ ರಾತ್ರಿ ಬಹಳ ಹೊತ್ತಾಗಿತ್ತು. ಮನೆಯ ಬಾಗಿಲು ಮುಂದಕ್ಕೆಳದಿತ್ತು. ತಳ್ಳಿಕೊಂಡು ಒಳಹೊಕ್ಕ. ಪಂಡಿತ ಪರಮಶಿವಯ್ಯನವರು ಪಾರ್ವತಿಯನ್ನು ತಬ್ಬಿಕೊಂಡು ಕುಳಿತಿದ್ದುದು ಲಾಟೀನು ಬೆಳಕಿನಲ್ಲಿ ಚೆನ್ನಾಗಿ ಕಂಡಿತು. ನರಸನನ್ನು ಕಂಡ ಕೂಡಲೆ ಪಂಡಿತರು ಹಾರಿ ದೂರ ನಿಂತು "ಎಲ್ಲಪ್ಪಾ ಹೋಗಿದ್ದೆ. ಎಂದೂ ಇಲ್ಲದ್ದು....ನಿನಗಾಗಿ ಕಾದಿದ್ದೆ. ಹೀಗೆಲ್ಲಾ ತಿರುಗಬಾರದು....ಹಿಡಿ ಇದನ್ನ" ಎಂದು ಗುಳಿಗೆಯೊಂದನ್ನು ಕೊಟ್ಟು ಗೆದ್ದೆನೆಂದು ಗೋಣು ಬಗ್ಗಿಸಿಕೊಂಡು ಪರಾರಿಯಾದರು. ಪಾರ್ವತಿಗೂ ಒಂದು ತರಹ ಆಯಿತು. ಮದುವೆಯ ಶಾಸ್ತ್ರವಾಗಿ ಎಂಟು ದಿನಕ್ಕೆ ಗಂಡ ಓಡಿ ಹೋದವನು ಬರದೆ ಇದ್ದರೆ, ಇನ್ನು ಪಾರ್ವತಿಗೆ ಪರಮಶಿವನಲ್ಲದೆ ಇನ್ನಾರು ದಿಕ್ಕು? "ಊಟ ಮಾಡ್ತೀಯಾ?" ಎಂದು ಕೇಳಿದಳು. "ಇಲ್ಲ" ಎಂದು ತನ್ನ ಮೂಲೆ

ಯಲ್ಲಿ ಕೆಮ್ಮುತ್ತಾ ಮುದುರಿಕೊಂಡ. ತನ್ನ ಖಾಯಿಲೆ ವಾಸಿಮಾಡು ವುದರಲ್ಲಿ ಬಹಳ ಆಸಕ್ತಿ ಹೊಂದಿ ಮತ್ತೆ ಮತ್ತೆ ಮನೆಗೆ ಪಂಡಿತರು ಬರು ತ್ತಿದ್ದುದ್ದು ಯಾಕೆಂದು ನರಸನಿಗೆ ಈಗ ಅರ್ಥವಾಯಿತು.

ಮರುದಿನ ಮುಂಜಾನೆ ಏಳುತ್ತಲೇ ಪಾರ್ವತಿಗೆ ಮೊದಲ ಪ್ರಶ್ನೆ ನರಸ ಹಾಕಿದ್ದು "ಅಕ್ಕಯ್ಯ ನನಗೆಂದು ಲಗ್ನ?" ಎಂಬುದು. ಅದಕ್ಕು ತ್ತರ ಪಾರ್ವತಿ ಕೊಟ್ಟಿದ್ದು "ಅಯ್ಯೋ ನಿನಗ್ಯಾರಪ್ಪ ಹೆಣ್ಣು ಕೊಡ್ತಾರೆ.... ....ಹೀಗೇ ಕೆಮ್ಮಿ ಕೆಮ್ಮಿ ಒಂದು ದಿನ........" ಎಂದು. ನರಸನಿಗೆ ತಡೆಯುದಾಯಿತು. ಕೆಮ್ಮಿ ಕೆಮ್ಮಿ ಹತ್ತುವರ್ಷದಮೇಲೆ ಸಾಯೋದಕ್ಕಿಂತ ನಾಳೇನೆ ಯಾಕೆ ಸಾಯಬಾರದು? ಎಂದು ಯೋಚಿಸತೊಡಗಿದ. ಅದೇ ಸೂಕ್ತವಾಗಿ ಕಂಡಿತು.

ನೇಣುಹಾಕಿಕೊಳ್ಳುವಷ್ಟು ಶಕ್ತಿ ಅವನಲ್ಲಿರಲಿಲ್ಲ. ಮತ್ತೆ ಹೇಗೆ ಸಾಯುವುದು? ಕೆಮ್ಮುತ್ತಾ ಹೋಗಿ ಭಾವಿ ಹಾರಿಯೇನೆಂಬ ಧೈರ್ಯ ಅವನಿಗಿತ್ತು. ಹಾಗೇ ಮಾಡಿದ, ಆದರೆ ಅವನ ಕೆಮ್ಮನ್ನೇ ಹಿಂಬಾಲಿಸಿ ಅವನ ಜೊತೆಗೇ ಹಾರಿ ನೀರಿನಿಂದ ಎಳೆದು ಹಾಕಿದರು ಯಾರೋ ಪುಣ್ಯಾ ತ್ಮರು. ಅವರನ್ನು ಶಪಿಸಿ ಬೈದ ನರಸ. ಈ ಪ್ರಯತ್ನದಲ್ಲಿ ಸೋತ ಮೇಲೆ ಭಾವಿಯ ಗೋಜಿಗೆ ಹೋಗದೆ, ಪಾದರಸಾದಿ ಪಾಷಾಣಗಳ ಕಡೆಗೆ ಗಮನ ಹೊರಳಿಸಿದ. ಪಂಡಿತರ ಬಳಿ ಅವು ಇರುತ್ತದೆಂದು ಅವನಿಗೆ ಗೊತ್ತು. ಅವರನ್ನೇ ಕೇಳಿದ. ಏನಾದರೂ ಮಾಡಿಕೊಳ್ಳಲೆಂದು ಪಾದ ರಸದ ಸೀಸೆಯನ್ನೇ ತಂದುಕೊಟ್ಟರು. ನರಸನಿಗೆ ಪರಮ ಸಂತೋಷ ವಾಯಿತು. ಇಹದ ಈ ನರಕದಿಂದ ಪಾರಾಗಿ ಸ್ವರ್ಗ ಸೇರೋಣವೆಂದು ವಿಷ ಕುಡಿಯಲು ಸಿದ್ಧನಾದ. ಸೀಸೆ ಹಿಡಿದು ಸಾಯಲು ಹೋದ ಕೂಡಲೆ ಪಂಡಿತರು, ಗಾಬರಿಯಾದ ಪಾರ್ವತಿಗೆ, "ಅದಷ್ಟು ಪಾದರಸ ಕುಡಿದರೂ ಆ ಪಾಪಿ ಪ್ರಾಣ ಹೋಗೋದಿಲ್ಲ ಯಾಕೆ ಹೆದರ್ತಿ" ಎಂದು ಹೇಳಿ ದರು. ಇದು ಪಕ್ಕದ ಕೋಣೆಯಲ್ಲಿದ್ದ ನರಸನಿಗೆ ಕೇಳಿಸಿತು. ಹಾಗೇ ಕೇಳುತ್ತಿದ್ದ. "ಎಂತೆಂಥಾ ಪಾಷಾಣಾ ತಿನ್ನಿಸಿದ್ದೀನಿ ಅವನಿಗೆ ಅಂಟ ಲಿಲ್ಲ........ಇನ್ನು ಇದರದೇನು" ಎಂದು ಪಂಡಿತರು ಹೇಳುತ್ತಿದ್ದರು. ಇಷ್ಟುದಿನ ಪರಮಶಿವಯ್ಯನವರು ಕೊಟ್ಟದ್ದು ವಿಷವೆಂದು ತಿಳಿದು ಅವನಿಗೆ

ಆಶ್ಚರ್ಯವಾಯಿತು. ದೊಡ್ಡ ಪ್ರಶ್ನೆ ಅವನ ಮುಂದೆ ಬಂದು ನಿಂತಿತು. "ನಾನೇಕೆ ಸಾಯಲಿಲ್ಲ? ಹಾಗಾದರೆ ಹೀಗೇ ಇರಬೇಕೆ? ಮುಂದೇನು ಗತಿ?"

ಪಾರ್ವತಿ ಪರಮಶಿವಯ್ಯನವರು ಹೊಂದಿಕೊಂಡಿರಲು ನರಸ ಅಡ್ಡಿ ಬರುವನೆಂದು ಅವನನ್ನು ಪರಲೋಕಕ್ಕೆ ಕಳಿಸಲು ಇಬ್ಬರೂ ಮಾಡಿದ ಮಸಲತ್ತು ಮುರಿದುಬಿತ್ತು. ಹೆಚ್ಚು ಯೋಚಿಸದೆ ಕೈಲಿದ್ದ ಸೀಸೆಯನ್ನು ಎತ್ತಿ ಗಟಗಟನೆ ಕುಡಿದಬಿಟ್ಟ. ಹೊಟ್ಟೆ ಭಾರವಾಯಿತು. ಮೇಲೊಂದು ಚೊಂಬು ನೀರು ಕಡಿದು ಹೊದ್ದುಕೊಂಡು ಮಲಗಿಬಿಟ್ಟ. ಏಳುವ ಹೊತ್ತಿಗೆ ಪ್ರಾಣ ಹೋಗಿರುತ್ತದೆಂದು ತಿಳಿದಿದ್ದ. ಇದೇ ಸಮಯವೆಂದು ಪಂಡಿತರು ಅವನ ದಿಂಬಿನ ಬಳಿ ಹತ್ತಾರು ವಿಷ ತುಂಬಿದ ಸೀಸೆಗಳನ್ನಿಟ್ಟು ಮನೆ ಸೇರಿದರು. ನರಸ ಎದ್ದಾಗ ಬಹಳ ಹಸಿದಿದ್ದ. ಒಂದೂ ತೋಚಲಿಲ್ಲ. ಬಳಿಯಲ್ಲಿದ್ದ ಸೀಸೆಗಳ ಬಿರಡಿ ತೆಗೆದು ಬರಿದು ಮಾಡಿದ.

ಏನು ಕುಡಿದರೂ ಸಾಯದ ತಾನು ಪರಾತ್ಪರ ಸ್ವರೂಪ ಹಾಲಾಹಲಧಾರಿ ಪರಮೇಶ್ವರನ ಅವತಾರವೆಂದು ತಿಳಿದ. ಯಾವ ವಿಷದ ಪ್ರಭಾವವೋ, ಕೆಮ್ಮು ಕೊಂಚ ಕಡಿಮೆಯಾಯಿತು. ಪಂಡಿತರ ಮನೆಗೆ ಹೋಗಿ ಅಲ್ಲಿದ್ದ ಚೂರ್ಣ ಭಸ್ಮಗಳನ್ನೆಲ್ಲಾ ಬರಿದುಮಾಡಲು ಪ್ರಾರಂಭಿಸಿದ. ತಮ್ಮ ಆಸ್ಪತ್ರೆಯನ್ನೇ ಬರಿದುಮಾಡಲು ಬಂದ ಭೇತಾಳದ ಕಾಟವನ್ನು ಹೇಗೆ ತಪ್ಪಿಸಿಕೊಳ್ಳುವುದೆಂದು ಯೋಚನೆಗೆ ಆರಂಭವಾಯಿತು.

ದಿನದಿನಕ್ಕೆ ವಿಷ ಸೇರಿದಂತೆಲ್ಲಾ ಕೆಮ್ಮು ಕಡಿಮೆಯಾಗತೊಡಗಿತು, ಮೈಬಿಡಲು ಪ್ರಾರಂಭಿಸಿದ. ಕ್ರಾಪ್‌ಕಟ್ಟು ಮಾಡಿಸಿದ-ಒಗೆದ ಪೈಜಾಮ ಹಾಕಿದ, ಒಳ್ಳೇ ಷರಟು ಹೊಲಿಸಿದ. ಆಸಾಮಿ ಅವತಾರವೇ ಬದಲಾಯಿಸಿಬಿಟ್ಟ ನರಸಯ್ಯ. ಪಂಡಿತ ಪರಮಶಿವಯ್ಯನವರು ಈ ಪ್ರಾರಬ್ಧ ಪೀಡೆಯ ಪರಿಹಾರಕ್ಕಾಗಿ ಪರಮಾತ್ಮನಿಗೆ ಪಂಚಾಮೃತಾಭಿಷೇಕ ಮಾಡಿಸಿದರು. ನರಸಯ್ಯನೋ ಹಗಲೆಲ್ಲಾ ಈ ಪಂಡಿತ ಮನೆಗೆ ಬರುವುದನ್ನು ಸಹಿಸದಾದ. "ಲೋ ಪಂಡಿತರಾಯ–ನಮ್ಮನೆ ಕಡೆ ಕಾಲಿಟ್ಟರೆ ಹಲ್ಲು ಮುರಿದೇನು" ಅಂತ ಹೇಳುವಷ್ಟರಮಟ್ಟಿಗೆ ಆಸಾಮಿ ಪ್ರಬಲಿಸಿದ. ಹೇಗಾದರೂ ಮಾಡಿ

ಈ ಪೀಡೆಯನ್ನು ಊರುಬಿಟ್ಟು ಓಡಿಸದಿದ್ದರೆ ಪಾರ್ವತಿಯನ್ನು ಮರೆಯ ಬೇಕಾದೀತೆಂದು ಪಂಡಿತರು ಉಪಾಯಹುಡುಕುತ್ತಿದ್ದರು.

ಒಂದು ದಿನ ನರಸ ಷೋಕಿಯಿಂದ ಕನ್ನಡಿ ಮುಂದೆ ನಿಂತುಕೊಂಡು ಗೀರುಮೀಸೆ ಸವರಿಕೊಳ್ಳುತ್ತಿದ್ದಾಗ ಪಂಡಿತರು ಬಂದರು. "ನರ್ಸಣ್ಣ ಒಂದ್ಯೋಚ್ನೆ ಬಂದಿದೆ ಹೇಳ್ಲಾ" ಎಂದರು. "ಹೇಳು" ಎಂದ. "ಈಗ್ನೋಡು ನಿನ್ನ ಎಲ್ಲಾ ಕೆಮ್ಮು ವಾಸಿಯಾಯ್ತು. ಏನು ತಿಂದರೂ ಜೀರ್ಣಿಸಿಕೊಳ್ಳ ಬಲ್ಲೆ. ಇದೇ ನೆಪದಿಂದ 'ಸರ್ವಭಕ್ಷಕ' ಅಂತ ಹೆಸರಿಟ್ಟುಕೊ. ಊರು ಊರು ತಿರುಗು, ಬೇಕಾದಷ್ಟು ಹಣ ಬರುತ್ತೆ. ಎಂಥಾ ವಿಷ ಬೇಕಾದರೂ ಕುಡಿತೇನೆನ್ನು–ಗಾಜು ತಿನ್ನು ನಿಂಗೇನೂ ಆಗೋಲ್ಲ........ನಾಳೇನೇ ಈ ಊರಿನ ಕಾಲೇಜಿನಲ್ಲಿ ಏರ್ಪಾಡು ಮಾಡೋಣ ಏನಂತಿ?" ಎಂದು ಹೇಳಿದರು. ಹಾಗೇ ಮಾಡುವುದಾಗಿ ನಿರ್ಧರಿಸಿದ.

ಕೊಂಚ ದಿನದ ನಂತರ ಇವನ ಪ್ರದರ್ಶನ ನಡೆಯಿತು. ಚಕ್ಕಳ, ಬ್ಲೇಡು, ಬ್ರಾಂದಿ, ಬೋರಿಕ್ ಆಸಿಡ್, ಬ್ರೊಮೈಡ್ ಪೇಪರ್ ಇಂದ ಹಿಡಿದು, ಪೊಟಾಸಿಯಂ ಸಿಯನೈಡ್, ಪಟಾಕಿಸರ– ಪರ್ಮ್ಯಾಂಗ ನೇಟ್‌ವರಿಗೆ ಎಲ್ಲಾ ತಿಂದುಬಿಟ್ಟ. ಹಣವೂ ಚೆನ್ನಾಗಿ ಬಂತು. ಇದನ್ನೇ ಉದ್ಯೋಗವಾಗಿಟ್ಟುಕೊಳ್ಳಲು ನಿರ್ಧರಿಸಿ ಮದರಾಸಿಗೆ ಆವತ್ತು ರಾತ್ರಿಯೇ ಹೊರಟುಬಿಟ್ಟ.

ಆ ರಾತ್ರಿಯೇ, ಪಂಡಿತ ಪರಮಶಿವಯ್ಯನವರು. ಪಾರ್ವತಿ ಮನೆಗೆ ಟ್ರಂಕು ಹಾಸಿಗೆ ಸಮೇತ ಬಂದು ಸೇರಿದರು.

ಮದರಾಸಿನ ಮೆಡಿಕಲ್ ಕಾಲೇಜಿನಲ್ಲಿ ಸರ್ವಭಕ್ಷಕ ಪ್ರೊ|| ನಾರ್ ಸನ್‌ರವರ ಪ್ರದರ್ಶನವಾಯಿತು. ಜನ ಕಿಕ್ಕಿರಿದು ನೆರೆದಿತ್ತು. ಮಾಯಾ ವರಂನಲ್ಲಿ ಈ ಮಾಯಾವಿಯ ಮೋಡಿಗೆ ಮರುಳಾದ ಮಿಡ್‌ವೈಫ್ ಮಿನಾಕ್ಷಮ್ಮ, ಮಾಲೆಹಾಕಿ ಮಡದಿ ಎನಿಸಿಕೊಂಡಳು. ಸಾಯಲು ಹೊರಟ ನರಸ ಸರ್ವಭಕ್ಷಕನಾದ ಪ್ರೊ|| ನಾರ್‌ಸನ್ ಆದ. ಮಿನಾಕ್ಷಿಯೊಂದಿಗೆ ಯೋಗ್ಯ ನಾಗಿ ಸಂಸಾರ ಮಾಡಿಕೊಂಡಿದ್ದಾನೆ.



# ಆತ್ಮಹತ್ಯೆ



ಸಂಜೆ. ಸಾಮಾನ್ಯವಾಗಿ ಕವಿಗಳು ವರ್ಣಿಸುತ್ತಾರಲ್ಲಾ ಅಂತಹ ಸಂಜೆ. ಬಹಳ ರಮ್ಯವಾಗಿತ್ತು. ಸೂರ್ಯನು ಮುಳುಗುತ್ತಾ ಇದ್ದ, ಅವನ ಮೇಲೆ ದೊಡ್ಡ ಕರಿಯ ಮೋಡ ತೇಲಿ ಬಂದು ನಿಂತಿತು. ಆ ಮೋಡವನ್ನು ಸೂರ್ಯನು ತನ್ನ ಕಿರಣಗಳಿಂದ ಭೇದಿಸಿದ್ದನು. ಮೋಡಕ್ಕೆ ಬಾಣ ನೆಟ್ಟಂತೆ ಕಾಣುತ್ತಿತ್ತು. ಹಕ್ಕಿಗಳು ಕಿಲಕಿಲನೆ ಕೂಗುತ್ತಾ ಗೂಡುಗಳನ್ನು ಸೇರಿದ್ದವು. ಎಲ್ಲೆಡೆಯಲ್ಲೂ ಆನಂದ, ಉತ್ಸಾಹ ನೆಲೆಸಿತ್ತು. ಇಂತಹ ಸಂತೋಷಕರವಾದ ಸಮಯದಲ್ಲಿ ನಾನು 'ಆತ್ಮಹತ್ಯೆ' ಮಾಡಿಕೊಳ್ಳಲು ಹೊರಟಿದ್ದು ಶುದ್ಧ ಮೂಢತನವೆಂದು ಆ ಸ್ಥಳಕ್ಕೆ ಹೋದ ಮೇಲೆ ತಿಳಿಯಿತು. ಆತ್ಮಹತ್ಯಕ್ಕೆ ಬಂದ ಸ್ಥಳವೇನೋ ಬಹಳ ಚೆನ್ನಾಗಿತ್ತು. ಆ ಊರಿನಿಂದ ಮೂರು ಮೈಲಿ ದೂರ, ನಿರ್ಜನ ಪ್ರದೇಶ, ಅಗಲವಾದ

ಆಳವಾದ ಭಾವಿ. ಹೇಳುವವರಿಲ್ಲ, ಕೇಳುವವರಿಲ್ಲ. ಇಂತಹ ಪ್ರಶಸ್ತವಾದ ಸ್ಥಳವನ್ನು ಹುಡುಕಿಕೊಂಡಿದ್ದಕ್ಕೆ ನನಗೆ ನಾನೇ ಶಹಭಾಷ್' ಎಂದು ಕೊಂಡೆ. ಭಾವಿ ಬಹಳ ಹಳೇ ಕಾಲದ್ದು. ಸುತ್ತಲೂ ಕಟ್ಟಿದ್ದ ಪಾವಟಿಕೆ ಗಳು ಮಳೆಯ ಹಾವಳಿಯಿಂದ ಅಲ್ಲಲ್ಲಿ ಬಿದ್ದುಹೋಗಿದ್ದವು. ಇನ್ನೊಂದು ಭಾಗ ಪಕ್ಕದ ಆಲದಮರದ ಬೇರಿನ ಹಾವಳಿಯಿಂದ ನಾಶವಾಗಿತ್ತು. ನೀರೆಲ್ಲಾ ಪಾಚಿಕಟ್ಟಿ ಹಾಳಾಗಿ ಹೋಗಿತ್ತು. ದಿಟ್ಟಿಸಿ ನೋಡಿದರೆ ದಿಗಿಲಾಗುವ ಸನ್ನಿವೇಶ. "ಇದೇ ಭಾವಿಯಲ್ಲಿ ಸತ್ತು ಹೆಣವಾಗುವೆಯಾ ?" ಎಂದು ಅಂತರಾತ್ಮ ಬಹಳ ನೊಂದುಕೊಂಡಿತು. ಹಾಗೇ ಯೋಚಿಸುತ್ತಾ ಮೇಲೆ ನೋಡಿದೆ. ನಿಬಿಡವಾಗಿ ಬೆಳೆದ ವಿಶಾಲ ಆಲದ ಮರದ ರಂಬೆ ಹಾದುಹೋಗಿತ್ತು. ಇದನ್ನು ನೋಡಿ ಇನ್ನೊಂದು ಯೋಚನೆ ಹೊಳೆಯಿತು. ಸುಮ್ಮನೆ ಕಲ್ಲುಗಿಲ್ಲು ಕಟ್ಟಿಕೊಂಡು ಭಾವೀ ತಳದಲ್ಲಿ ಇರುವುದಕ್ಕಿಂತ ಭಾವಿ ಪಕ್ಕದಲ್ಲಿರುವ ಆಲದ ಮರಕ್ಕೆ ನೇಣು ಹಾಕಿಕೊಂಡು ಸಾಯುವುದು ಸೂಕ್ತವಾಗಿ ಕಂಡಿತು. ಏತಕ್ಕೇ ಅನ್ನಿ—ಹಾಳು ಭಾವಿ ಯಾವ ರಾಯನ ಕಾಲದ್ದೊ ಏನೊ, ಇದರಲ್ಲಿ ಏನೇನಿದೆಯೊ ಏನೊ, ದೇವರೆ ಬಲ್ಲ. ಎಷ್ಟು ಹಾವುಗಳಿವೆಯೋ, ಮೊಸಳೆಗಳಿವೆಯೋ! ವಿಪರೀತ ಹೊಲಸು ನೀರು. ಇಂತಹದರಲ್ಲಿ ಸಾಯುವುದಕ್ಕಿಂತ ಸುಮ್ಮನೇ ಇರೋದು ಪರಮ ಸುಖ. ಸಾಯೋದು ಸಾಯುತ್ತೇನೆ ಸುಖವಾಗಿ ಸರಿಯಾದ ಸ್ಥಳದಲ್ಲಿ ಸಾಯೋಣಾಂತ ಅಷ್ಟೆ. ನೀವ್ಯೇನೇ ಅನ್ನಿ. ನಾನಿದೇ ಮೊದಲು ಸಾಯುತ್ತಿರುವುದು ನನ್ನ ಜೀವಮಾನದಲ್ಲಿ. ಸರಿ ಆ ಆಲದಮರಕ್ಕೆ ನೇಣುಹಾಕಿ ಕೊಳ್ಳೋದೂಂತ ನಿರ್ಧರಿಸಿದೆ. ಗಾಳೀನೂ ಚೆನ್ನಾಗಿ ಬೀಸುತ್ತೆ, ಸುತ್ತಲಿನ ಪ್ರಕೃತಿ ಸೌಂದರ್ಯದ ಸೊಗಸು ಸವಿಯುತ್ತಾ, ಹಾಯಾಗಿ ನೇತಾಡುತ್ತಾ ತಣ್ಣಗೆ ಪ್ರಾಣ ಬಿಡಬಹುದು. ಇದೆಲ್ಲಾ ಬಿಟ್ಟು ಭಾವೀಲಿ ಬಿದ್ದರೆ ಮೂರು ಮೂರು ದಿನಗಟ್ಟಲೆ ಭಾವಿ ತಳದಲ್ಲಿ ಇರಬೇಕು. ನೀರು ಕುಡಿದು ಹೊಟ್ಟೆ ಉಬ್ಬಿಹೋಗುತ್ತೆ, ಬಹಳ ವಿಕಾರವಾಗಿ ಕಾಣುತ್ತೆ. ಇದೆಲ್ಲಾ ಪಂಚಾಯಿತಿ ಯಾರು ಅನುಭವಿಸುವವರು? ನೇಣುಹಾಕಿಕೊಂಡರೆ ಇದೆಲ್ಲಾ ಇರೋದಿಲ್ಲ, ಕುತ್ತಿಗೆ ಮೇಲೆ ಕೊಂಚ ಗುರ್ತು ಬೀಳುತ್ತೆ ಅಷ್ಟೆ. ಇದೆಲ್ಲಾ ಯೋಚಿಸಿ ನೇಣು ಹಾಕಿಕೊಳ್ಳಲು ಹಗ್ಗವಿರಲಿಲ್ಲವಾದ್ದರಿಂದ ಮರುದಿನ ಹಗ್ಗ ತಂದು

ಇದೇ ಮರಕ್ಕೆ ನೇಣು ಹಾಕಿಕೊಳ್ಳುವುದೆಂದು ನಿಶ್ಚೈಸಿ, ಸೊಗಸಾದ ರೆಂಬೆಯನ್ನು ಹುಡುಕಿಟ್ಟುಕೊಂಡು ಮನೆಯಕಡೆ ಹೊರಟೆ.

❦ ❦ ❦ ❦

ಇದೇನು—ಇವನಿಗೆ ಹುಚ್ಚೊ ಬೆಪ್ಪೊ, ಇದ್ದಕ್ಕಿದ್ದಹಾಗೆ ಆತ್ಮಹತ್ಯಕ್ಕೆ ಹೊರಟಿದ್ದಾನೆ? ಎಂದು ನೀವು ಆಶ್ಚರ್ಯಪಡಬಹುದು. ಅಲ್ಲದೆ ಆತ್ಮಹತ್ಯೆ ಪ್ರತಿಜ್ಞೆಗೆ ಕಾರಣವೇನೆಂದು ಕೇಳಬಹುದು. ಕಾರಣ ಬಹಳ ದೊಡ್ಡದು. ಮನೆಗ ಸಂಬಧಪಟ್ಟಿದ್ದು. ಅರ್ಥಾತ್ ನನ್ನ ಮತ್ತು ನನ್ನ ಹೆಂಡತಿಯ ಕಲಹ ಪ್ರಸಂಗ. ಜೀವನದಲ್ಲಿ ಬೇಸರಿಕೆ ಹುಟ್ಟಿದೆ, ಬಹಳ ಯೋಚನೆಗೀಡಾಗಿ, ಬಳಲಿ, ಬಾಡಿ ಕಡೆಗೆ ಆತ್ಮಹತ್ಯೆವೇ ಸರಿ ಎಂದು ತೀರ್ಮಾನಿಸಿದೆ. ಮನುಷ್ಯನಿಗೆ ಇರೋದು ಮಾನ ಮರ್ಯಾದೆ, (ಕೊಂಚ ಘನತೆ ಇದ್ದರೆ ಮೇಲೂಂತ ತೋರುತ್ತೆ). ಅದೇ ಹೋದ ಮೇಲೆ ಈ ಪ್ರಪಂಚದಲ್ಲಿದ್ದೇನು ಪ್ರಯೋಜನ? ಹೋಗಲಿ, ಯಾರಿಗಾದರೂ ಅವರ ಜೀವಮಾನದಲ್ಲಿ ಕೊಂಚ ಮಾನ ಹೋಗೇ ಹೋಗುತ್ತೆ, ಹಾಗೆ ಅವಮಾನವಾದವರೆಲ್ಲ ಆತ್ಮಹತ್ಯೆ ಮಾಡಿಕೊಂಡಿದ್ದರೆ ಜಗತ್ತಿನ ಜನಸಂಖ್ಯೆ ಈಗಿರುವುದಕ್ಕಿಂತ ಎಷ್ಟೋ ಪಾಲು ಕಡಿಮೆ ಇರುತ್ತಿತ್ತು. ಇಷ್ಟೆಲ್ಲಾ ತಿಳಿದಿದ್ದು ಇವನೇಕೆ ಆತ್ಮಹತ್ಯ ಮಾಡಿಕೊಳ್ಳಲು ಪ್ರತಿಜ್ಞೆ ಮಾಡಿದನೆಂದು ನೀವು ಕೇಳಬಹುದು. ಕಾರಣ ಇದೆ. ನಮ್ಮ ಆಫೀಸರು ಬೈದು ಹತ್ತು ಜನ ಕ್ಲಾರ್ಕುಗಳ ಎದುರಿಗೆ ಅವಮಾನ ಮಾಡಿದರೆ—ಸಂಬಳಾ ಕೊಡೊ ಧಣಿ ಅವನಲ್ಲದೆ ಇನ್ನಾರು ಬೈಯ್ಯಬೇಕು? ಮಾನ ತೆಗಿಬೇಕು? ಇರೊ ಮಾನದಲ್ಲಿ ಕೊಂಚ ತೆಗೀತಾನೆ. ಅಷ್ಟೆ ತಾನೆ ತೆಗೀಲಿ—ಅನ್ನಬಹುದು. ಸ್ನೇಹಿತರು ಅವಮಾನ ಮಾಡಿದರೆ ಏನೋ ತಮಾಷೆ ಅಂತ ಆಗಿಹೋಗುತ್ತೆ. ಹಾಗಾಗಿರದೆ ಪತಿಯೇ ಪರದೈವವೆಂದು ತಿಳಿದ, ನನಗಿಂತ ಚಿಕ್ಕವಳಾದ, ಮನೇಲಿ ಅಡಿಗೆ ಕೆಲಸ ಮಾಡಿಕೊಂಡು ಬಿದ್ದಿರುವ ಹೆಂಡತಿ ಎನ್ನೋಳಕೈಯಿಂದ ಅವಮಾನ ಆದಮೇಲೆ ಈ ಪ್ರಪಂಚದಲ್ಲಿದ್ದೇನು ಪ್ರಯೋಜನ? ಮನೆಯೊಳಗೆ ಏನೋ ಕಲಹ ನಡೆದಿರಬಹುದು ಅದಕ್ಕೆ ಅವಳು ಅಡಿಗೇ ಮನೇಲಿ “ ನಿಮಗೆ ತಲೇಲಿ ಬುದ್ಧಿ ಇಲ್ಲ. ನಿಮ್ಮನ್ನ ಕಟ್ಟಿಕೊಂಡಿದ್ದಕ್ಕೆ ನಾನು ಸುರುಕೊಳ್ಳೊ ಸುಖ ಅಷ್ಟರಲ್ಲೇ ಇದೆ. ಒಂದು ಸೀರೆ ಇಲ್ಲ. ಸಿಲ್ಕಿಲ್ಲ. ನಿಮ್ಮ ಯೋಗ್ಯತೆಗೆ ಇಷ್ಟು ಬೆಂಕಿ

ಹಾಕಾ" ಎಂದು ಬೈದಿದ್ದರೆ—ಏನೋ ಹುಡುಗಿ ಕೋಪಸ್ವಭಾವ ಇವತ್ತಲ್ಲ ನಾಳೆ ದಾರೀಗೆ ಬಂದಾಳು ಎಂದುಕೊಳ್ಳಬಹುದಾಗಿತ್ತು. ಇಷ್ಟಕ್ಕೂ ಅಂದಿದ್ದು ಅಡಿಗೇ ಮನೇಲಿ ಹತ್ತು ಜನದ ಮುಂದಲ್ಲ ಎಂದುಕೊಂಡು ಸಮಾಧಾನದಿಂದ ಇರಬಹುದಾಗಿತ್ತು, ಹಾಗೆಲ್ಲ ನಾನು ಆತ್ಮಹತ್ಯದ ವಿಷಯದಲ್ಲಿ ದುಡುಕುವವನಲ್ಲ. ಹತ್ತು ಜನದ ನಡುವೆ ತುಂಬಿದ ಅಂಗಡೀಲಿ ಎದುರುಮನೆ ರಂಗರಾಯರು ಮತ್ತು ಅವರ ಕುಟುಂಬದ ಎದುರಿಗೆ ನನ್ನ ಮಾನ ಕಳೆದಳಲ್ಲಾ ನನ್ನ ಅರ್ಧಾಂಗಿ ಎನಿಸಿಕೊಂಡವಳು, ನಾನು ಏನು ಮಾಡಲಿ? ಇನ್ನು ಹೇಗೆ ನನ್ನ ಪ್ರಾಣಾ ಇಟ್ಕೊಂಡರಲಿ? ನನಗೆ ಅವಮಾನವಾದರೆ ಅವಳಿಗೂ (ನನ್ನ ಅರ್ಧಾಂಗಿ ಆದ್ದರಿಂದ) ಅರ್ಧ ಅವಮಾನವಾಗುತ್ತೆ ಎನ್ನುವುದು ತಿಳಿಯದೇ ಹೋಯಿತಲ್ಲಾ ಎಂದು ವ್ಯಸನವೂ ಆಯಿತು. ಮುಚ್ಚು ಮರೆಯಾತಕ್ಕೆ ಸ್ವಾಮಿ ನಡೆದದ್ದು ಇಷ್ಟೆ—ಮೊನ್ನೆ ದಿನ ಅವಳನ್ನ ಕಟ್ಕೊಂಡು ಏನೋ ಸಿಲ್ಕು ಸೀರೆ ಅಂತ ಹೊಡ ಕೊಳ್ಳುತ್ತಾಳೆ ಅಂತ ಪೇಟೆಕಡೆ ಹೊರಟೆ. ಆ ವಿಲಾಸ ಈ ವಿಲಾಸ, ಎಲ್ಲಾ ವಿಲಾಸಗಳನ್ನೂ ತಿರುಗಿ ಕಡೆಗೆ ಎಂಥದೋ ಒಂದು ವಿಲಾಸಕ್ಕೆ ನುಗ್ಗಿದೆವು. ನನ್ನ ದುರದೃಷ್ಟಕ್ಕೆ ಎದುರು ಮನೆ ರಂಗರಾಯರೂ ಅವರ ಕುಟುಂಬ ಬಂದಿದ್ದರು. ಅಂಗಡೀಲಿ ಕೊಂಚ ಗಲಾಟೆಯಾಗಿ ಗಿರಾಕಿಗಳು ಬಹಳವಿದ್ದರು. ಎಲ್ಲಾ ಮುಖ್ಯ ನನ್ನ ಗ್ರಹಚಾರ, ಅಷ್ಟು ಜನದೆದುರಿಗೆ ಅವಮಾನವಾಗಬೇಕೂಂತ ಇರಬೇಕಾದರೆ ಯಾರು ಏನು ಮಾಡುತ್ತಾರೆ. ಅಂಗಡೀಲೆಲ್ಲಾ ಬಹಳ ಜೋರಾಗಿ ಮಾತನಾಡತೊಡಗಿದಳು. ನಾನು ಅದು ಅಂದರೆ ಅವಳು ಇದು. ನಾನು ಚನ್ನಾಗಿದೆ ಈ ಬಟ್ಟೆ ಎಂದರೆ ಅವಳು ಇಲ್ಲ. ಹೀಗೆ ಮಾಡತೊಡಗಿದಳು. ಇವಳೇಕೆ ನನಗೆ ಎದುರಾಡಬೇಕು? ನಾನು ಅವಳ ಗಂಡ. ಅವಳು ನನ್ನ ಹೆಂಡತಿ. ನಾನು ಅಂದಿದ್ದಕ್ಕೆ ಎದುರಾಡೋದೂ ಅಂದರೇನು? ಇದೆಲ್ಲಾ ನೋಡಿ ನನಗೆ ಕೋಪ ಉಕ್ಕಿ ಬರತೊಡಗಿತು. ಗಾಂಧೀಜಿಯವರನ್ನು ನೆನಸಿಕೊಂಡು ಶಾಂತಿಯಿಂದ ವರ್ತಿಸತೊಡಗಿದೆ. ಇನ್ಯಾರಾದರೂ ಆಗಿದ್ದರೆ "ಸಿಲ್ಕೂಬೇಡ ಗಿಲ್ಕೂಬೇಡ ನಡೀ ಮನೆಗೆ" ಎಂದು ಮನೆಗೆ ಹೋಗಿ ಸರಿಯಾಗಿ ಬುದ್ಧಿ ಕಲಿಸುತ್ತಿದ್ದರು. ಹೋಗಲಿ ಹುಡುಗಿ ಇನ್ನುಮೇಲೆ ತಿಳಿದುಕೊಂಡಾಳೂಂತ ಸುಮ್ಮನಿದ್ದೆ. ಒಂದು ನಮೂನೆ ಸಿಲ್ಕು

ಬಹಳ ಚನ್ನಾಗಿತ್ತು. ಎಂತಹವರಾದರೂ ಒಪ್ಪಲೇ ಬೇಕು ಅಂಥಾದ್ದು. ಇದನ್ನವಳು ಒಪ್ಪುವಳೆಂದು "ಇದು ನೋಡೆ ಚೆನ್ನಾಗಿದೆ ಬ್ಲೌಜಿಗೆ. ಇದೇ ಚೆನ್ನಾಗಿದೆ ಎಷ್ಟು ಬೇಕೋ ತೆಗೆದುಕೊ" ಎಂದೆ. "ಸುಮ್ಮನೇ ಇರೀಂದ್ರೆ ನಿಮಗೇನು ತಿಳಿಯುತ್ತೆ" ಅಂದೇ ಬಿಟ್ಟಳು. ರಂಗರಾಯರು ನಕ್ಕುಬಿಟ್ಟರು, ಅವರ ಕುಟುಂಬವೂ ನಕ್ಕಂತೆ ಭಾಸವಾಯಿತು. ಅಂಗಡಿಗೆ ಅಂಗಡಿಯೇ ನನ್ನ ನೋಡಿ ನಗುವಂತೆ ತೋರಿತು. ಇದಕ್ಕಿಂತ ಅವಮಾನ ಬೇಕೇ? ನಾಳೆ ದಿನ ಬೀದೀಲಿ ಹೇಗೆ ತಲೆಎತ್ತಿಕೊಂಡು ಹೋಗುವುದು? ಇನ್ನು ನಾನು ಇದ್ದರೆಷ್ಟು ಹೋದರೆಷ್ಟು. ಇದಕ್ಕೆ ಪ್ರಾಯಶ್ಚಿತ್ತ ಆತ್ಮಹತ್ಯವಲ್ಲದೆ ಇನ್ನಾವುದು? ಎಂದು ಮನಸ್ಸಿನಲ್ಲಿಯೇ ಹೋರಾಟ ನಡೆದಿತ್ತು. ಇಷ್ಟರಲ್ಲಿ ಅವಳು ೧೦-೧೫ ರೂಪಾಯಿನ ಬಟ್ಟೆ ಹರಿಸಿದ್ದಳು. ಎಲ್ಲಾದರೂ ಹಾಳಾಗಿ ಹೋಗಲೀಂತ ಬಿಲ್ಲು ಕೊಟ್ಟು ಮನೆಕಡೆ ಹೊರಟೆವು. ಮುಖ್ಯ ನನ್ನ ಗ್ರಹಚಾರ. ಅದು ಯಾವ ಗಳಿಗೆಯಲ್ಲಿ ಮನೆಬಿಟ್ಟೆನೋ ಏನೋ ಉದ್ದಕ್ಕೂ ಅವಮಾನವೇನೇ? ಮಾರ್ಕೆಟ್ಟಿನ ಬಳಿ ಬಂದೆವು. ಅಲ್ಲಿ ಕಾರಿನಲ್ಲಿ ಇವಳ ಸಮಾಜದ friendಡು ಕುಳಿತಿದ್ದಳು. ನನ್ನಾಕೇನ ನೋಡಿ ಅವಳು "ಏನೆ ಶಾರದ ಇಲ್ಲೆ ಇದ್ದೀಯ. ಸಮಾಜದಲ್ಲಿ ಮಿಸ್ ಅಮೆಜಾ಼ರವರಿಂದ ಲೆಕ್ಚರ್ ಇದೆ ಬರೋದಿಲ್ಲವೇ" ಎಂದಳು. "ಅಯ್ಯೊ ಮರೆತೇ ಹೋಯ್ತು ವಿಷಯ ಚನ್ನಾಗಿದೆ ಅಲ್ವೇ? ಮನೇಗ್ಹೋಗಿ ಬೇಗ ಬರ್ತೇನೆ" "ಬಹಳ ಸ್ವಾರಸ್ಯವಾದ ವಿಷಯ, 'ಸ್ತ್ರೀ ಸ್ವಾತಂತ್ರ್ಯ' ನೀನು ಮನೆಗೆ ಹೋಗಿ ಬರಲು ಹೊತ್ತಾಗೊಲ್ವೆ? ಅಲ್ಲಿ ಜಾಗಾ ಸಿಕ್ಕೋದಿಲ್ಲ, ಬಾ ಕಾರಿನಲ್ಲೇ ಹೋಗೋಣ" ಎಂದಳು. ಅಷ್ಟು ಹೇಳಿದ್ದೇ ತಡ ನನ್ನಾಕೆ "ಕೂಸಿನ್ನ, ಸಿಲ್ಕ್ ಬಟ್ಟೇನ ತೆಗೆದುಕೊಂಡು ಮನೆಗೆ ಹೋಗಿ, ನಾನು ಲೆಕ್ಚರ್‌ಗೆ ಹೋಗಿ ಬರ್ತೇನೆ ಮಗು ಅತ್ತರೆ ಕಪಾಟಿನಲ್ಲಿ ಹಾಲಿದೆ ಹಾಕಿ" ಎಂದು ಮಗೂನ್ನೂ, ಬಟ್ಟೆ ಗಂಟನ್ನೂ ನನಗೆ ಕೊಟ್ಟು ಹೊರಟೇ ಹೋದಳು. ನಾನು ಮಿಕಿ ಮಿಕಿ ನೋಡುತ್ತಾ ನಿಂತೇ ಇದೇನೆ. ಮಗು ಅಳಲು ಆರಂಭಿಸಿತು. ಅದನ್ನ ಸಮಾಧಾನ ಮಾಡುತ್ತಾ ಬೇಗ ಮನೆಯ ಕಡೆ ಹೊರಟೆ. ದಾರಿ ಉದ್ದಕ್ಕೂ ಜನರು ನನ್ನನ್ನೇ ನೋಡುತ್ತ ನಗುತ್ತಿರುವಂತೆ ಭಾಸವಾಯಿತು.

........ಇದಕ್ಕಿಂತ ಅವಮಾನ ಬೇಕೆ? ಅದಕ್ಕೇ ನಾನು ಆತ್ಮಹತ್ಯಕ್ಕೆ ಸಾಧನಗಳನ್ನು ಹುಡುಕುತ್ತ ಬಂದಿದ್ದು.

❧ ❧ ❧ ❧

ಬೆಳಗಿನ ಜಾವ ಹೊರಗೆ ವಿಪರೀತ ಛಳಿ, ೩-೩ಂಕ್ಕೆ ಸರಿಯಾಗಿ ಅಲಾರಾಂ ಹೊಡೆಯಿತು. ಸಾಯಲು ಏಳಬೇಕೆಂದು ಅಲಾರಾಂ ಇಟ್ಟಿದ್ದೆ. ಅದರ ಕೆಲಸ ಅದು ಮಾಡಿತು. ಇನ್ನು ನನ್ನ ಕೆಲಸ ನಾನು ಮಾಡಬೇಕು. ಏಳಲಾರದೆ ಎದ್ದೆ. ದೀಪ ಹಚ್ಚಿ ಹಿತ್ತಲಕಡೆ ಬಟ್ಟೆ ಒಣಗಲು ಹಾಕಿದ್ದ ಹಗ್ಗವನ್ನು ಬಿಚ್ಚಿ ಸೈಕಲ್ಲಿಗೆ ತಗಲು ಹಾಕಿದೆ. ದೇಹವನ್ನು ತ್ಯಜಿಸಲು ಹೊರಡಲುದ್ಯುಕ್ತನಾದೆ. ಸತ್ಯವಾನನ ಸಾವು ಅವನಿಗೆ ತಿಳಿದಿರಲಿಲ್ಲ. ಸಾವಿತ್ರಿಗೆ ತಿಳಿದಿತ್ತು. ನನ್ನದು ಹಾಗಾಗಿರದೆ, ನನ್ನ ಸಾವು ನನಗೆ ಗೊತ್ತಿತ್ತು. ಆದರೆ ನನ್ನ ಸಾವಿತ್ರಿಗೆ ಗೊತ್ತಿರಲಿಲ್ಲ. ಕಡೆಯ ಬಾರಿ ಮಗುವಿನ ಮುದ್ದು ಮುಖವನ್ನು ನೋಡಿ ಹೋಗೋಣವೆಂದು ಮಗುವಿನ ಬಳಿ ಹೋದೆ. ಸ್ವಿಚ್ ಹಾಕಿದೆ ದೀಪ ಹತ್ತಿತ್ತು—ಮಗು ತಾಯಿಯ ಬಳಿ ನಿಶ್ಚಿಂತೆಯಿಂದ ಮಲಗಿತ್ತು. "ಮಗು ನಟರಾಜ ಇಂದಿನಿಂದ ತಂದೆ ಇಲ್ಲದ ಮಗುವೆಂದು ಹೆಸರು ಪಡೆದೆ. ಇನ್ನು ನಿನಗಾರು ದಿಕ್ಕು. ಬಾಲಾ ಪರದೇಶಿಯಾಗುವೆಯಾ?" ಎಂದು ಮನ ಮರುಗಿತು. ಕಣ್ಣಲ್ಲಿ ನೀರು ಬಂದಿತು, ಅಳಲಾರದೆ ಅತ್ತೆ. ಪ್ರೀತಿಯಿಂದ ಮುದ್ದಿಟ್ಟೆ. ಮಡದಿ ಶಾರದೆಯ ಕಡೆ ನೋಡಿದೆ—ಏನೂ ಅರಿಯದ ಬಾಲೆಯಂತೆ ಮಲಗಿದ್ದಳು. ಮದುವೆಯಾಗಿ ಮೂರು ವರ್ಷವಾಯಿತು. ಅಂದಿನಿಂದ ನನ್ನವಳೆಂದು ಲಾಲಿಸಿ ಪಾಲಿಸಿದ್ದೆ. "ಇಂದು ನಿನ್ನ ಬಿಟ್ಟು ಹೋಗಬೇಕಾಗಿದೆ. ಇಂದು ನಿನ್ನ ಪತಿಯು ಬೇರೇ ಲೋಕಕ್ಕೆ ಹೋಗುತ್ತಾನೆ. ನಾಳಿನಿಂದ ನೀನು ವಿಧವೆ" ಎಂದು ನನಗೆ ನಾನೆ ಮರುಗಿದೆ, ಬಹಳ ಮರುಗಿದೆ. ಕೈಯಿಂದ ಅವಳ ಹಣೆಯ ಮೇಲಿನ ಕುಂಕುಮವನ್ನು ಅಳಿಸಲು ಹೋದೆ ಕೈಬರಲಿಲ್ಲ. ಸತ್ತ ಮೇಲೆ ಅವಳೇ ಅಳಿಸಿಕೊಳ್ಳುತ್ತಾಳೆಂದು ಆತಹತ್ಯ ಮಹಾ ಕಾರ್ಯಕ್ಕೆ ಹೊರಡಲು ಅನುವಾದೆ. ಸಿದ್ಧಾರ್ಥನು ಮಡದಿ ಮಕ್ಕಳನ್ನು ಬಿಟ್ಟು ಬುದ್ಧನಾಗಲು ಹೊರಟ ದೃಶ್ಯದಂತಿತ್ತು. ಸಿದ್ಧಾರ್ಥನು ಮಡದಿ ಮಕ್ಕಳನ್ನು ಬಿಟ್ಟದು

ಲೋಕ ಕಲ್ಯಾಣಕ್ಕಾಗಿ, ನಾನು ಹೋಗುತ್ತಿರುವುದು ಮಾನಕ್ಕಾಗಿ. ಸತ್ತರೆ ಹೋದ ಮಾನ ಬರುತ್ತದೆಯೆ? "ಹಿಂದಿರುಗು ಹೇಡಿ. ಹೆಂಡತಿಯಿಂದ ಅವಮಾನವಾಯಿತೆಂದು ಸಾಯುತ್ತಾರೆಯೆ? ಅವಳನ್ನು ದಾರಿಗೆ ತರುವುದು ಬಿಟ್ಟು ಪ್ರಾಣ ಕಳೆದುಕೊಳ್ಳುತ್ತೀಯಾ ಪ್ರಾಣಿ? ಸಾಕು ಹಿಂತಿರುಗು" ಎಂದು ಎಲ್ಲಿಂದಲೋ ಹೇಳಿದಂತಾಯಿತು. ಅದಾವುದಕ್ಕೂ ಕಿವಿಗೊಡದೆ ಸೈಕಲ್ಲನ್ನು ಹತ್ತಿ ಹೊರಡಲು ಉದ್ಯುಕ್ತನಾದೇ ಅಷ್ಟರಲ್ಲಿ ನಮ್ಮ ಮನೆಯ ಕಡೆ ಎರಡು ಜಟಕಾ ಗಾಡಿಗಳು ಬಂದುವು. ಅವು ನಮ್ಮ ಮನೇ ಮುಂದೆ ನಿಂತವು. ಇದ್ಯಾರಪ್ಪ ಇಷ್ಟು ಹೊತ್ತಿನಲ್ಲಿ ಬಂದವರು ಎಂದು ನೋಡಲು ನಿಂತೆ........ಗಾಬರಿಯಾಯಿತು. ಮಾವನವರು, ಅತ್ತೆಯವರು, ಭಾವ ಮೈದುನ....ಇತ್ಯಾದಿ ಆರು ಜನರು ಬೆಳಗಿನಜಾವದ ರೈಲಿಗೆ ಇಳಿದರು. ನನ್ನ ನೋಡಿ "ಇದೇನು ಇಷ್ಟು ಹೊತ್ತಿನಲ್ಲಿ ಸೈಕಲ್ ಮೇಲೆ ಎಲ್ಲಿಗೆ ಹೊರಟಿದ್ದೀರಿ? ನಾಳೆ ದಿನ ಮಗು ನಟರಾಜನ ಹುಟ್ಟಿದಹಬ್ಬ ಬನ್ನಿ ಅಂತ ಶಾರದ ಕಾಗದ ಬರೆದಿದ್ದಳು. ನಿಮಗೆ ಗೊತ್ತಿಲ್ಲವೆ?" ಎಂದು ನನ್ನನ್ನು ಕೇಳಿದರು. "ಓಹೋ ಗೊತ್ತಿಲ್ಲದೆ ಏನು ನಿಮ್ಮನ್ನ ವೆಯಿಟ್ ಮಾಡೋದಕ್ಕೆ ಸ್ಟೇಷನ್ನಿಗೆ ಬರೋಣಾಂತಲೇ ಹೊರಟಿದ್ದೆ ಈಗ" ಎಂದು ಹೇಳಿ ಅವರನ್ನೆಲ್ಲಾ ಒಳಗೆ ಬರಹೇಳಿದೆ. ಆತ್ಮಹತ್ಯಕ್ಕೆ ಅಡ್ಡಿ ಬಂದೊದಗಿತಲ್ಲಾ ಎಂದು ಬಹಳ ಮರುಗಿದೆ. "ಲೇ ಶಾರದಾ ಏಳೆ ನಿಮ್ಮಪ್ಪ ಬಂದಿದ್ದಾರೆ ಬನ್ನಿ ಅಂತ ಕಾಗದಾ ಬರೆಯೋದು, ಬಂದವರನ್ನ ಉಪಚರಿಸದೇ ಇರೋದು" ಎಂದು ಆ ನನ್ನ ಶತ್ರು ಹೆಂಡತಿಯನ್ನ ಎಬ್ಬಿಸಿದೆ. ಇನ್ನು ಅವಳನ್ನ ಹಿಡಿಯುವವರೇ ಇಲ್ಲ. ಅಪ್ಪ ಅಮ್ಮ ಅಣ್ಣ ಎಲ್ಲಾ ಬಂದಿದ್ದಾರೆ. ತನ್ನ ಗಂಡನ ಮಾನ ಅವಮಾನ ನೋಡದೆ ಮೆರೀತಿದ್ದಾಳೆ. ಸುಖವಾಗಿ ಸಾಯೋಣ ಅಂದರೆ ಏನಾದರೊಂದು ಅಡ್ಡಿ. ಅವರೆಲ್ಲಾ ೮-೧೦ ದಿನಗಳ ವರೆಗೂ ಇರಬಹುದು, ಅಲ್ಲಿಯವರೆಗೂ ಆತ್ಮಹತ್ಯಕ್ಕೆ ಅವಕಾಶವಿಲ್ಲ. ಆಮೇಲೆ ಸಾಯೋಣ ಅಂದರೆ ಶ್ರಾವಣಮಾಸ, ಹಬ್ಬ ಹರಿದಿನಗಳು, ಗೌರಿ ಗಣೇಶ ಇವುಗಳ ಅವಾಂತರದಲ್ಲಿ ಎಲ್ಲಿ ಸಾಯೋದು? ಅಂತೂ ನನ್ನ ಆತ್ಮಹತ್ಯ ಮಹಾಕಾರ್ಯ ಸಿವಿಲ್ ಕೋರ್ಟಿನ ಹೀಯರಿಂಗ್‌ಗಳ ಹಾಗೆ ಬಹಳ ಮುಂದೆಹೋಯಿತು. ಮೂರು ದಿನಗಳ ನಂತರ ನನ್ನ ಆಲದ

ಮರದ ಕಡೆ ವಾಕಿಂಗ್ ಹೋಗಿದ್ದೆ. ಆ ರೆಂಬೆ ಹಾಗೇ ಇದೆ, ನನಗಾಗಿ ಅದರ ರೆಂಬೆ ಕಾಯುತ್ತಾ ಇದೆ. ನನಗೆ ಇನ್ನೂ ಪುರುಸೊತ್ತಾಗಿಲ್ಲ.

ಋ ಋ ಋ ಋ

ಈಗ ನನಗೆ ಆರು ಜನ ಮಕ್ಕಳು, ೨ ಹೆಣ್ಣು ೪ ಗಂಡು ನನ್ನಾಕೆ ಆರೋಗ್ಯದಿಂದ ಇದ್ದಾಳೆ. ನನಗೆ ಸಂಬಳದಲ್ಲಿ ಬಡ್ತಿಯಾಯಿತು. ಬಹಳ ಸುಖವಾಗಿದ್ದೇವೆ. ಇತಿ, ನಮಸ್ಕಾರಗಳು.



# ಲಲಿತ ಊರಿಗೆ ಹೋದಾಗ

"ಇದೇನೆ! ಬೆಳಿಗ್ಗೆ ಅಷ್ಟೊತ್ತಿಗೇ ಹಾಸಿಗೆ ಬಟ್ಟೆ ಕಟ್ತಾ ಇದ್ದೀಯಾ?"

"ಬೆಂಗಳೂರಿನಿಂದ ಸೀನು ಬಂದಿದಾನೆ ಕರೆಯೋದಕ್ಕೆ; ಹೋಗಿ ಬರೋಣಾಂತ."

"No, ಹೋಗಕೂಡದು; ಹೋದರೆ ಇಲ್ಲಿ ನನಗೆ ಊಟಕ್ಕೆ ತಾಪತ್ರಯ ಆಗುತ್ತೆ. ನಿನಗೇನು? ಬೇಯಿಸಿಕೊಂಡು ತಿನ್ನು, ಅಂತೀಯ!"

"ಇಲ್ಲಾಂದ್ರೆ; ಖಂಡಿತ; ಸಂಜೆಗೆ ಬಂದು ಬಿಡುತ್ತೇನೆ."

"ಅಲ್ಲ ಕಣೆ, ಸಂಜೆಗೆ ಬರೋಳು ಹಾಸಿಗೆ ಏಕೆ ಕಟ್ತಾ ಇದ್ದೀಯಾ?"

"ಇಲ್ಲ; ಹಾಸಿಗೆ ತೆಗೊಂಡು ಹೋಗೋಲ್ಲ; ಬರೀ ಬಟ್ಟೆ ತೊಗೊಂಡು ಹೋಗ್ತೇನೆ. ಆಯ್ತೆ? ಖಂಡಿತ ಸಂಜೆಗೆ ಬಂದು ಬಿಡ್ತೇನೆ. ನಿಮ್ಮಾಣೆ ನಾನು ಒಂದು ಕ್ಷಣ ಅಲ್ಲಿ ನಿಲ್ಲೋಲ್ಲ."

"ಲೇ! ಸುಮ್ಮನೆ ಇರೆ. ಕಂಡಿದೀನಿ ನಿನ್ನ ಆಣೇನ. ಇಂಥಾ ಆಣೆ ಮೂರ್ಕಾಸುಗಳಿಗೆಲ್ಲಾ ನಾನು ಮರುಳಾಗೋನಲ್ಲ, ತಿಳೀತೇನೆ? ನೀನು **ಹೋಗಕೂಡದು.**"

"ಊಂ – ಹೋಗಬಾರದು, – ಇವರು ಮಾತ್ರ ಪ್ರತಿ ಭಾನುವಾರ ಎಲ್ಲಿಗಾದರೂ ಹೋಗಬೇಕು. ಭಾನುವಾರ ಹೋಗೋಕೆ ಶನಿವಾರದಿಂದಲೇ ಪೀಠಿಕೆ ಹಾಕ್ತಿರೋದು. 'ಲಲಿತ, ನಾಳೆ ಬೆಂಗಳೂರಿಗೆ ಹೋಗಿ ಬರ್ತೀನೆ, ಕೊಂಚ ಕೆಲ್ಸ ಇದೆ. ಏನಾದರೂ ಅಲ್ಲಿಂದ ತರೋ ಸಾಮಾನಿದೆಯೇನು?' ಅಂತ ಅನ್ನೋದು ಹೊರಡೋದು, ನಿಮಗಿರುವ ಕೆಲಸ ನಾ ಕಾಣೆನೆ? ಸಿನಿಮಾನೋ, ಇಲ್ಲ ಸ್ನೇಹಿತರ ರೂಮಿನಲ್ಲಿ ಇಸ್ಪೀಟು ಪ್ಯಾಕೋ ಕಾಯ್ತಾ ಇರುತ್ತೀ."

"ಇನ್ನು ನನಗೆ ರೇಗುತ್ತೆ ನೋಡು! ಕೆಲಸ ಇದ್ರೇನೆ ಕಣೆ ನಾನು ಹೋಗೋದು. ಇರ್ಲಿ, ಇಲ್ದೆ ಇರ್ಲಿ, ನಾನ್ಹೋದರೆ ನೀನಗೇನೀಗ? ಕೈ ಬೀಸ್ಕೊಂಡು ಹೋಗ್ತೀನಿ, ಬರ್ತೀನಿ; ನೀನು ಹೊರಟರೆ ಮಕ್ಕಳನ್ನು ಕಟ್ಟಿಕೊಂಡು ಹೋಗಬೇಕಲ್ಲ, ಇವ್ರೋ ತುಂಟ ಹುಡುಗರು; ಇದ್ದ ಕಡೆ ಇರೋಲ್ಲ. ನನಗೆ ಅವನ್ನ ನೋಡೋಕಾಗೋಲ್ಲ. ಅಲ್ಲಿ ಜಟ್ಕಾಕ್ಕೆ ಅದಕ್ಕೆ ಇದಕ್ಕೆ, ಅಂತ ಮೂರು ನಾಲ್ಕು ರೂಪಾಯಿ ಖರ್ಚಿಗೆ ದಾರಿ ಆಗುತ್ತೆ. ನಂದೂಂದ್ರೆ ಹೋಗ್ತಾ ಬರ್ತಾ ಆರೇ ಆಣೆ."

"ಪಾಪ! ಆರೇ ಆಣೆ, ಇಲ್ಲಿ ನೋಡಿ, ಈಕಡೆ ನೋಡೀಂದ್ರೆ – Please!"

"ಇಲ್ಲ, ನಿನ್ನ ಕಡೆ ನೋಡೊಲ್ಲ. ನೋಡಿದರೆ ಮಂತ್ರ ಮಾಡಿ ಬಿಡ್ತೀಯೆ. ಈ ಪುಸ್ತಕ ಓದುತ್ತಲೇ ಮಾತಾಡುತ್ತೇನೆ. ಅದೇನು ಹೇಳ್ತೀಯೋ ಹೇಳು."

"ನೋಡ್ದೆ ಇದ್ರೆ, ನಾನು ಹೇಳೋದನ್ನಾದರೂ ಕೇಳಿ; – ನಾನು ಅಮ್ಮನೂರಿಗೆ ಹೋಗಿ ಬಹಳ ದಿನ ಆಯಿತು. ಇವತ್ತು ಅನಾಯಾಸ ರಜ ಇದೆ. ಹುಡುಗರನ್ನ ಇಟ್ಕೊಕೊಂಡಿರಿ. ಸಂಜೆಗೆ ವಾಪಸ್ಸು ಬಂದು ಬಿಡುತ್ತೇನೆ. ಕೈಗೂಸು ಶಾಮಿಯನ್ನ ಕರಕೊಂಡು ಹೋಗುತ್ತೇನೆ, ರಾಮುನ್ನ ಪದ್ದುನ್ನ ಸುಧಾರಿಸೋಕೆ ಆಗೋಲ್ಲವೆ? ಹೂಂ ಅನ್ನಿ."

"ಹೂಂ – ಅಂದೆ – ಆಮೇಲೆ."

"ಆಮೇಲೇನು? ನನ್ನ ತಮ್ಮ ಸೀನು ಹೇಗಿದ್ದರೂ ಬಂದಿದಾನೆ;

ಕರ್ಕೊಂಡು ಹೋಗುತ್ತಾನೆ. ಈ ಷಟಲ್ ಟ್ರೇನ್‌ಗೆ ಹೋಗಿ ಸಂಜೆ ಪ್ಯಾಸಂಜರ್‌ಗೆ ಬಂದುಬಿಡುತ್ತೇನೆ.”

“ಆಗೋಲ್ಲ ಕಣೆ, ಈ ಪಿಳ್ಳೆಗಳನ್ನ ಸುದಾರಿಸೋಕೆ ಆಗೋಲ್ಲ. ನೀನು ಆಕಡೆ ಹೋಗುತ್ತಲೆ ಈಕಡೆ ಜೋಡಿ ವಾಲಗಕ್ಕೆ ಪ್ರಾರಂಭ ಮಾಡುತ್ತವೆ, ನನಗೆ ರೇಗುತ್ತೆ. ಎರಡೇಟು ಬಿಡುತ್ತೇನೆ, ವಾಲಗ ಇನ್ನೂ ಜೋರಾಗುತ್ತೆ, ಆವಾಗ ನನಗೇನೂ ತೋಚೊಲ್ಲ, ನನಗೂ ಅಳು ಬರುತ್ತೆ. ಅಷ್ಟೆ ಆಗೋದು.”

“ಪಾಪ! ಅಳು ಬರುತ್ತೆ–ಅಳೀಂದ್ರೆ ಬಹಳ ಚೆನ್ನಾಗಿರುತ್ತೆ. ಇರಲಿ, ಅವು ಅಳೋಲ್ಲ ಒಂದೂ ಇಲ್ಲ—Please! ದಮ್ಮಯ್ಯ! ನನಗೆ ಅಪ್ಪಣೆ ಕೊಡೀಂದ್ರೆ—ನೀವು ಬಹಳ ಜಾಣರು ಪ್ರಿಯ!”

“ಅಹಹ! ಹೌದು ಪ್ರಿಯೆ, ನೀನೂ ಜಾಣೆ!—ಎಲ್ಲಿ? ಒಂದು ಬಾರಿ ನಗು. ದಯವಿಟ್ಟು ನೀನು ಇಲ್ಲೆ ಇರುವಂಥವಳಾಗು, ನಿನ್ನ ಪ್ರಯಾಣ ವನ್ನು ನಿಲ್ಲಿಸು ಪ್ರಿಯೆ!”

“ಹೋಗೀಂದ್ರೆ, ಯಾವಾಗಲೂ ತಮಾಷೇನೆ; ನನಗೆ ಅದೊಂದೂ ಬೇಡ. ಈಗ ನನಗೆ ಅಪ್ಪಣೆ ಕೊಡಿ, ಇಲ್ವೆ ಇದ್ರೆ, ಇಲ್ಲ ಅನ್ನಿ”

“ಇಲ್ಲ. ನೀ ಹೋಗಕೂಡದು; ನನಗೆ ಅನ್ನಕ್ಕೆ ತೊಂದರೆ ಆಗುತ್ತೆ. ನೀನೇನಂದ್ರೂ ನಿನ್ನ ನಾ ಬಿಡೋದಿಲ್ಲ.”

“ಬಿಡಬೇಡಿ, ಕಟ್ಕೊಳ್ಳಿ; ದೇವರೆ, ಹೆಂಗಸನ್ನಾಗಿ ಯಾಕೆ ಹುಟ್ಟಿಸಿದೆ? ಗಂಡಸಾಗಿದ್ದರೆ ಯಾರ ಹಂಗೂ ಇಲ್ಲದೆ ಹೋಗಬಹು ದಾಗಿತ್ತು. ಈ ಗಂಡಸರೋ ನಮಗೆ ಬೇಕಾದಾಗ ಬಿಡೋಲ್ಲ; ಅದೊಂದು ದೊಡ್ಡಸ್ತಿಕೆ ಅಂತ ತಿಳಿದುಕೊಂಡಿದಾರೆ. ‘ಲಲಿತ, ಸಿನಿಮಾಕ್ಕೆ ಬರ್ತಿಯೇನೆ? ಲಲಿತ, ವಾಕಿಂಗ್ ಬರ್ತಿಯೇನೆ? ಲಲಿತ ಅಂಗಡಿ ಕಡೆ ಹೋಗಿ ಬರೋಣ ಬಾರೆ? ಲಲಿತ, ಆದಕ್ಕೆ ಬಾರೆ, ಇದಕ್ಕೆ ಬಾರೆ’ ಅಂತ ಕರೆಯೋದು. ಬರೋಲ್ಲ ನೀವೇ ಹೋಗೀಂದ್ರೆ ರೇಗೋದು. ಎಲ್ಲಾದ್ರು ಹಾಯಾಗಿ ಹೋಗೋಣಾಂದ್ರೆ ಈ ಹಾಳು ಮಕ್ಕಳು ಬೇರೆ. ಈ ಮಕ್ಕಳು ಇಲ್ಲದೆ ಇದ್ದಿದ್ದರೆ ಚೆನ್ನಾಗಿತ್ತು.”

“ಲೇ ಸಾಕೆ; ಸಾಕುಮಾಡೆ, ನಿನ್ನ ಪ್ರಲಾಪಾನ; ನಾನು ಕೇಳಲಾರೆ.

ಆ ಮಕ್ಕಳ ಮೇಲೆ ಯಾಕೆ ಬಿದ್ದು ಬಡ್ಕೋತೀಯ? ಹೋಗು; ಅಳೋದು ನಿಲ್ಸಿ, ಹೋಗು; ಈ ಹೆಂಗಸರಿಗೆ ಅದೆಲ್ಲಿರುತ್ತೋ ಅಳು ಕೂಡಲೆ ಬಂದು ಪಿಡುತ್ತೆ. ಇವಳು ಮಹಾ (Educated) ವಿದ್ಯಾವತಿ ಅಂತೆ. ಏನಾದರೇನಂತೆ? ಹೆಣ್ಣುಜಾತಿ! ಗುಣ ಎಲ್ಲಿ ಹೋಗುತ್ತೆ? ಅಲ್ಲಿ ನೋಡು! ನಿನ್ನ ತಮ್ಮ ಬಂದ."

"ಅಕ್ಕಾ! ಹೊತ್ತಾಯಿತು ಹೊರಡೋದು ತಾನೆ? ಕಣ್ಣಲ್ಲೇನು ನೀರು! ಯಾಕೆ?"

"ನೀರಲ್ಲ, ಸೀನು, ಅದು ಊರಿಗೆ ಹೋಗ್ತೇನೆ ಅಂತ ಅಂದ ತಕ್ಷಣ ಹೋಗೂಂತ ಅಂದ್ರಲ್ಲ, ಅದಕ್ಕೆ ಆನಂದ ಜಾಸ್ತಿಯಾಗಿ ಆನಂದ ಬಾಷ್ಪ ಸುರೀತಾ ಇದೆ ಅಷ್ಟೆ."

"ನಿನ್ನ ಕವಿತೆ ಇರಲಿ; ಸೀನೂಗೆ ಕಾಫಿ ಕೊಡು. ಏನು ವಿಶೇಷ ಸೀನು?"

"ವಿಶೇಷ ಏನೂ ಇಲ್ಲ—ರಾಜು ಹುಟ್ಟಿದ ಹಬ್ಬ; ಅಲ್ಲದೆ ನಮ್ಮ ರತ್ನನ್ನ ನೋಡೋಡಕ್ಕೆ ಬರ್‍ತಾರೆ ಇವತ್ತು. ಅಮ್ಮ ಕರೆದುಕೊಂಡು ಬಾ ಎಂದಳು. ಭಾನುವಾರ, ಹೇಗಿದ್ದರೂ ರಜ, ಅಂತ ಬಂದೆ ಅಷ್ಟೆ."

"ಓಹೋ—ಹಾಗ್ಹೇಳು. ರತ್ನಾನ ನೋಡೋಕೆ ಬರ್‍ತಾರೆಯೋ? ಯಾರು? ನಿಮ್ಮಪ್ಪ ಹೇಳ್ತಾ ಇದ್ರಲ್ಲ ಆ ಎಡತೊರೆ ಸೇತೂರಾಯರ ಮಗನೇನೊ? ಯಾವುದೋ ಕಾರ್ಖಾನೀಲಿದಾನೇ ಅಂತ ಹೇಳ್ತಾ ಇದ್ರು."

"ಹೌದು, ಅವರೆ."

"ಕಾಫಿ, ಸೀನು—ಆರಿಹೋಗುತ್ತೆ, ನಿಮಗೂ ಬೇಕೇನೂಂದ್ರೆ?"

"ಕೊಂಚ ಕೊಡು....ರಾಮು ಪದ್ದು ಇಲ್ಲೇ ಇರ್‍ಲಿ ಅಂತೀಯಾ!"

"ಇರ್‍ಲಿ ಅಂದ್ರೆ, ಸಂಜೆಗೆ ಹೇಗಿದ್ದರೂ ಬಂದುಬಿಡುತ್ತೇನೆ. ಕುಕ್ಕರ್ ಇಟ್ಟು ಬಿಡಿ, ಸುಖವಾಗಿ ಅಡಿಗೆ ಆಗಿಹೋಗುತ್ತೆ, ಇಡೋದು ಗೊತ್ತು ತಾನೆ?"

"ಅದೇ; ಜೆಂಕಿ ಮಾಡಿ ಪಾತ್ರೇನ ಅದರ ಮೇಲಿಟ್ಟು....!"

"ಹ್ಞೂ, ಅಷ್ಟೆ! ಒಂದನೇ ಪಾತ್ರೇಲಿ ನೀರು, ಬೇಳೆ; ಎರಡನೇದರಲ್ಲಿ ಅಕ್ಕಿ, ನೀರು; ಮೂರನೇದು ಹುಳಿ ಉಪ್ಪು ಖಾರಕ್ಕೆ. ಒಂದು ಗಂಟೆ

ಹೊತ್ತು ಒಲೆ ಮೇಲಿರಲಿ: ಇಳಿಸಿ ಒಗ್ಗರಣೆ ಕೊಟ್ಟು ಬಡಿಸಿಬಿಡಿ. ಕಪಾಟಿನಲ್ಲಿ ಮೊಸರಿದೆ, ಚಿಕ್ಕಪಾತ್ರೇಲಿರೋ ಮೊಸರು ಬಡಿಸಿ; ಹಾಲು ಕಾಯಿಸಿಟ್ಟಿದ್ದೇನೆ, ಹೆಪ್ಪು ಹಾಕಿ ಬಿಡಿ. ದೊಡ್ಡ ಬಟ್ಟಲಲ್ಲಿರೊ ತುಪ್ಪ ಬಡಿಸಬೇಡಿ—ಚಿಕ್ಕ.... "

"ಹೊತ್ತಾಯಿತಕ್ಕ!"

"ಸಾಯಂಕಾಲ ಖಂಡಿತ ಬಂದು ಬಿಡೆ, ಮತ್ತೆ; ಬರದೆ ಇದ್ದರೆ ನೋಡು."

"ಹೂಂ! ಖಂಡಿತ ಬರ್‍ತೇನೆ, ಉಪ್ಪಿನಕಾಯಿ ಬೇಕಾದರೆ ಬಲಗಡೇಲಿರೋ ಜಾಡೀಲಿದೆ, ದೊಡ್ಡ ಜಾಡೀಲಿರೋದನ್ನ ಮುಟ್ಟಬೇಡಿ, ಅದು ಮಡೀಲಿದೆ. ನಾನು ಹೊರಡಲಾ?"

"ರಾಮು ಬಂದು ಅತ್ತರೆ?...."

"ಅಳೋಲ್ಲ ಒಂದೂ ಇಲ್ಲ. ಪದ್ದುನ್ನ ಅಳಿಸಬೇಡಿ."

"ಸಂಜೆಗೆ ಖಂಡಿತ ಬಂದುಬಿಡೆ"

* * * *

ಮನೆಯೆಲ್ಲಾ ಬಿಕೋ ಅನ್ನುತ್ತಿದೆ. ಹೀಗೆ ಹುಡುಗರನ್ನು ಬಿಟ್ಟು ಅವಳೆಂದೂ ಹೋಗಿರಲಿಲ್ಲ. ಇವರನ್ನ ಸುಧಾರಿಸೋದು ಹೇಗೆ ಅನ್ನೋದು ಬಹಳ ದೊಡ್ಡ ಸಮಸ್ಯೆಯಾಯಿತಲ್ಲಾ! ಅವಳು ಊರಿಗೆ ಹೊರಡೋವಾಗ ಅದೇನು ದೇವರು ಬುದ್ಧಿ ಕೊಟ್ಟಿದ್ದನೋ ಏನೋ, ಸುಮ್ಮನೆ ಇದ್ದ ಹುಡುಗರು ಆಕೆ ಹೋದಕೂಡಲೆ ಅಳುವುದಕ್ಕೆ ಪ್ರಾರಂಭ ಮಾಡಿಬಿಟ್ಟವು. ರಾಮು ಪರವಾಯಿಲ್ಲ, ಹೇಳಿದರೆ ಕೇಳುತ್ತಾನೆ. ಈ ಪಿಲ್ಟು ಪದ್ದುನ್ನ ಸುಧಾರಿಸುವುದು ಬಹಳ ಕಷ್ಟ. ಪದ್ದು ಬಹಳ ಮುದ್ದು. ಆ ಕೂಸಿಗೆ ಹೊಡೆಯುವುದಕ್ಕೆ ಕೈ ಬರುವುದಿಲ್ಲ. ಆ ಅಳು ನಿಲ್ಲಿಸೋ ಬಗೆ ಹೇಗೆ? ಅಪ್ಪ ಅಂದೆ; ಅಣ್ಣ ಎಂದೆ; ಜಾಣ ಪದ್ದು ಎಂದೆ; ಕಾಸು ಬೇಕೆ? ಎಂದೆ; ಏನೆಂದರೂ ಸುಮ್ಮನ್ನಲಿಲ್ಲ. ಬರೀ ಈ ಹುಡುಗರನ್ನು ಸುಧಾರಿಸುವುದಕ್ಕೇ ಇಷ್ಟು ಹೊತ್ತಾದರೆ ಹೇಗೆ? ಅಡಿಗೆ ಬೇರೆ ಮಾಡಬೇಕು; ಆ ಯೋಚನೆ ಬೇರೆ ತಲೆಯಲ್ಲಿ ಮೇಜಾಡುತ್ತಿತ್ತು. "ಪದ್ದಣ್ಣ! ನನ್ನಣ್ಣ ಮರಿ! ಸುಮ್ಮನೆ ಇರಪ್ಪ!" ಎಂದೆ. "ಊ....ಊ....ನಂಗೆ ಅಮ್ಮ ಬೇಕು" ಎಂದು ಅಳು

ಜಾಸ್ತಿ ಮಾಡಿದ. ಅಂಗಡಿಯಿಂದ ಬಿಸ್ಕತ್ತು, ಚಾಕಲೇಟು, ಪೆಪ್ಪರಮೆಂಟು ಎಲ್ಲಾ ತರಿಸಿಕೊಟ್ಟೆ. ಕಡೆಗೆ ಪದ್ದು ಸುಮ್ಮನಾದಾಗ, ಎಡೆಗಡೆ ಆಟದ ಬುಟ್ಟಿ, ಎದುರಿಗೆ ಚಾಕಲೇಟು, ಬಿಸ್ಕತ್ತಿನ ರಾಸಿ, ಬಲಗಡೆ ಬಸವಣ್ಣ. ಹಿಂದುಗಡೆ ಗೋಲಿ ಚಂಡುಗಳ ರಾಸಿ ಬಿದ್ದಿತ್ತು ; ಸಧ್ಯ ಸುಮ್ಮನಾದನಲ್ಲ ಎಂದು ಎನ್ನಿಸಿಹೋಯಿತು, ಪದ್ದುನ್ನ ಸುಮ್ಮನೆ ಮಾಡಲು ಇದ್ದ ಬುದ್ಧಿಯಲ್ಲಾ ಬರಿದಾಗಿ, ಕೋಪದಿಂದ ಕಣ್ಣು ಕೆಂಪಾಗಿ, ತುಂಬಿದ ಅಕ್ಕಿ ಮೂಟೆಯುನ್ನು ಮಾರ್ಕೆಟ್ಟಿನಿಂದ ವಿಶ್ವೇಶ್ವರಪುರಕ್ಕೆ ಹೊತ್ತುಕೊಂಡು ಬಂದಷ್ಟು ಸುಸ್ತಾಗಿಹೋಗಿತ್ತು. ಪದ್ದುನ್ನ ಸುಧಾರಿಸೋಕೆ ಇಷ್ಟು ಸುಸ್ತಾಗಿ ಹೋದೆನಲ್ಲ. ಇನ್ನು ಆ ಪುಣ್ಯಾತಗಿತ್ತಿ ಲಲಿತ ಮೂರು ಪಿಳ್ಳೆಗಳನ್ನ ಹೇಗೆ ಸುಧಾರಿಸುತ್ತಿರಬಹುದು? ಎಂದು ಆಶ್ಚರ್ಯವಾಯಿತು. ಅವಳ ಆ ಶಕ್ತಿಗೆ ಮೆಚ್ಚಿ ಅವಳಿಗೆ ಶಹಬಾಷ್‌ಗಿರಿಯನ್ನರ್ಪಿಸಿದೆ.

ರಾಮು ಎಲ್ಲೋ ಮೂಲೇಲಿ ಆಡ್ತಾ ಇದ್ದ. ಪದ್ದು ತನ್ನ ಸುತ್ತಲಿದ್ದ ಸಾಮಾನು ರಾಸಿಯ ಎಣಿಕೆ ನಡೆಸಿದ್ದ. ನಾನು ಮನಸ್ಸಿನಲ್ಲಿ ಹುಡುಗರನ್ನು ಹೊಡೆಯುದೇನೆ ಸಮಾಧಾನಪಡಿಸಿದ್ದಕ್ಕಾಗಿ ಹೆಮ್ಮೆಪಡುತ್ತಾ ಅಡಿಗೆ ಮನೆಯನ್ನು ವಿಚಾರಿಸಿಕೊಳ್ಳಲು ಹೊರಟೆ. ಇದ್ದಿಲ ಒಲೆಯಲ್ಲಿ ಕೊಂಚ ಕೆಂಡವಿತ್ತು. ಇನ್ನಷ್ಟು ಇದ್ದಲು ಹಾಕಿ ಬೆಂಕಿಮಾಡಿ, ಕಾಯಿಸದೆ ನೆಲುವಿನ ಮೇಲಿಟ್ಟ ಹಾಲನ್ನು ಒಲೆಯ ಮೇಲಿಟ್ಟು, ಸ್ನಾನಮಾಡಿ ಬರುವುದರಲ್ಲಿ ಚೆನ್ನಾಗಿ ಕಾದಿರುವುದೆಂದು ಸ್ನಾನಕ್ಕೆ ಹೊರಟೆ. ಅರ್ಧ ಸ್ನಾನವಾಗಿತ್ತು, ಸೋಪು ಹಚ್ಚಿಕೊಂಡಿದ್ದೆ. ಮುಖಕ್ಕೆಲ್ಲಾ ಸಾಬೂನು ಬಳಿದುಕೊಂಡಿದ್ದೆ. ಕಣ್ಣು ಬಿಡುವಹಾಗಿರಲಿಲ್ಲ. ನಡುಮನೆಯಿಂದ ಕಿಟ್ಟನೆ ಕಿರಿಚಿದ ಧ್ವನಿ ಬಂತು. "ಏನೋ ಅದೂ ರಾಮೂ?" ಅಂದೆ, "ಅಮ್ಮಾ... ಆ....ಆ....ಕೈಯಿ....ಕಲ್ಲು....ಗೋಡೆ....ಆ ಆ....ಮಳೆ....ಅಣ್ಣ" ಎಂದು ಹೇಳುತ್ತ ರಾಮು ಅಳುತ್ತಾ ಬಂದ. "ಅಯ್ಯೋ ಮುಂಡೇದೆ, ಗೋಡೆಗೆ ಮಳೆ ಹೊಡೀಬೇಡ, ಕೈಗೆ ಏಟು ಬೀಳುತ್ತೆ ಅಂತ ನಾ ನಾ ಗ ಲೆ ಹೇಳಲಿಲ್ಲವೆ?" ಎಂದು ಕಣ್ಣು ಮುಚ್ಚಿಕೊಂಡು ಗದರಿಸಿದೆ. "ಸ್ನಾನ ಮಾಡಿ ಬರ್‍ತೀನೆ ತಡಿ" ಎಂದು ಹೇಳಿ ಬೇಗ ಸ್ನಾನಮಾಡಿ ಪೂರೈಸಿ ಬಿಡೋಣವೆಂದು ಕಣ್ಣು ಮುಚ್ಚಿಕೊಂಡೆ; ತಂಬಿಗೆ ಇಟ್ಟಿದ್ದ ಸ್ಥಳಕ್ಕೆ

ಕೈಹಾಕಿದೆ. ತಂಬಿಗೆ ಕೈಗೆ ಸಿಗದೆ, ನನ್ನ ಕೈ ಅದರ ಅಂಚಿಗೆ ಬಡಿದು ದಡೀರ್ ಎಂದು ಬಚ್ಚಲು ಕಟ್ಟೆಯಿಂದ ಕೆಳಕ್ಕೆ ಉರುಳಿ ಬಚ್ಚಲು ಮನೆಯಲ್ಲೆಲ್ಲಾ ನೀರು ತುಂಬಿಕೊಂಡಿತು. ಕಣ್ಣು ಬಿಡದಿದ್ದರೆ ನಿರ್ವಾಹವಿಲ್ಲ, ಬಿಟ್ಟರೆ ಕಣ್ಣಿನೊಳಕ್ಕೆ, ಸಾಬೂನು ಹೋಗಿ ಉರಿಯಲು ಶುರು ಆಗುತ್ತೆ. ಬಹಳ ಪ್ರಯಾಸದಿಂದ ಕೊಂಚ ಕಣ್ಣು ಬಿಟ್ಟೆ; ತಂಬಿಗೆ ಬೋರಲಾಗಿ ಬಿದ್ದುಕೊಂಡಿತ್ತು; ಬಾಗಿ ತೆಗೆದುಕೊಂಡೆ. ಅಷ್ಟರಲ್ಲಿ ಸೋಪಿನ ನೊರೆ ಕಣ್ಣೊಳಕ್ಕೆ ನುಗ್ಗಿ ಬಹಳ ಗಲಾಟೆ ಮಾಡತೊಡಗಿತು. ಜಾಗ್ರತೆಯಾಗಿ ತಣ್ಣಗಿರುವ ನೀರಿನಿಂದ ಕಣ್ಣು ತೊಳೆದುಕೊಂಡೆ. ಆದರೂ ಉರಿ ಹೋಗಲಿಲ್ಲ. ಅಂತು ಇಂತೂ ಸ್ನಾನದ ಶಾಸ್ತ್ರ ಮಾಡಿದೆ. ರಾಮು ಅಳುತ್ತಲೇ ಇದ್ದ. ನನಗೆ ತಲೆ ಚಿಟ್ಟು ಹಿಡಿದುಹೋಗಿತ್ತು, ಇವೆಲ್ಲಿಯ ಪ್ರಾರಬ್ಧ ಗಂಟು ಬಿತ್ತಲ್ಲ ಎಂದು ಆಗಲೆ ಕೋಪ ತಲೆದೋರುತ್ತಿತ್ತು. "ಎಲ್ಲೋ ಬಿತ್ತು ಏಟು ಕತ್ತೆ! ಕಲ್ಲಿನ ಸಂಗಡ ಹುಡುಗಾಟವೆ? ಅಯ್ಯೋ ಅಷ್ಟೇನೆ! ಇಷ್ಟಕ್ಕೆಲ್ಲಾ ಅಳುತ್ತಾರೇನೋ ರಾಮು? ಕೊಂಚ ಜಜ್ಜಿದ ಹಾಗಾಗಿದೆ ಅಷ್ಟೆ. ಕೈ ಮುರಿದಿಲ್ಲ, ಕೈ ಮುರಿದು ಹೋದರೆ ಅಳಬೇಕಪ್ಪಾ—ಏನೂ ಆಗಿಲ್ಲ ಸುಮ್ಮನಿರು" ಎಂದು ಜಜ್ಜಿಹೋದ ಬೆರಳಿಗೆ ಒದ್ದೆಬಟ್ಟೆ ಕಟ್ಟುತ್ತಾ ಸಮಾಧಾನ ಕೋಪದಿಂದ ಹೇಳಿದೆ. ಅವನೂ ಕೊಂಚ ಸಮಾಧಾನದಿಂದ ಅಳುವಿನ ರಭಸವನ್ನು ತಡೆಯುತ್ತಾ ಬಂದು ಸ್ವಲ್ಪ ಹೊತ್ತಾದ ಮೇಲೆ ಸುಮ್ಮನಾದ. ಇನ್ನು ನಾನು ಒಲೆಯ ಮೇಲಿಟ್ಟಿದ್ದ ಹಾಲಿನ ಗತಿ ಏನಾಯಿತೋ ನೋಡೋಣವೆಂದು ಅಡಿಗೆಯಮನೆಗೆ ಹೋದೆ. ಹಾಲು ಕುದಿಯುತ್ತಿತ್ತು. ಅರೆ, ಹಾಲು ಉಕ್ಕಲಿಲ್ಲವೇಕೆ? ಎಂದು ಯೋಚಿಸಿ ಸೌಟನಿಂದ ಕೈಯಾಡಿಸಿದೆ, ಹಾಲು ಒಡೆದುಹೋದ ಹಾಗೆ ಕಾಣಿಸಿತು. ಹುಳಿಹುಳಿ ವಾಸನೆ ಬರುತ್ತಿತ್ತು. ಅನುಮಾನವಾಯಿತು. ನೆಲುವಿನ ಕಡೆ ನೋಡಿದೆ, ಇನ್ನೊಂದು ಪಾತ್ರೆ ಇತ್ತು. ಇಳಿಸಿ ನೋಡಿದೆ ಹಾಲು! ಕಾಯಿಸದೆ ಇದ್ದದ್ದು. ಆಗ ನೆನಪಾಯಿತು—ಕಾಯಿಸಲು ಹಾಲು ಇಡುವ ಬದಲು ಮಜ್ಜಿಗೆ ಇಟ್ಟಿದ್ದೇನೆಂದು. ಬೇಸ್ತು ಬಿದ್ದ ಮುಖವಾಯಿತು. ಅಯ್ಯೋ ಎಷ್ಟೊಂದು ವೇಳೆ ನಷ್ಟವಾಯಿತಲ್ಲ ಎಂದು ಮನ ಮರುಗಿತು. ಇನ್ನೇನು ಮಾಡುವುದು? ಅಂದು ಕುದಿಯುತ್ತಿದ್ದ ಮಜ್ಜಿಗೇನ ತೆಗೆದು

ಹಾಲು ಇಟ್ಟೆ. ಇಷ್ಟೆಲ್ಲಾ ಅವಾಂತರದಲ್ಲಿ ಕುಕ್ಕರ್‌ಪಾತ್ರೆ ಇಡುವ ವಿಧಾನ ಮರೆತುಹೋಯಿತು. ಪುನಃ ತಲೆಯ ಮೇಲೆ ಕೈ ಹೊತ್ತುಕೊಂಡು ಕುಳಿತೆ. ಈ ಹುಡುಗರು ಇವತ್ತು ಹೇಗೆ ಅನ್ನವನ್ನು ಕಂಡಾವು? ಎನಿಸಿ ಹೋಯಿತು. ಅವಳು ಹೊರಡುವಾಗ ಹೇಳಿದ ಮಾತುಗಳನ್ನು ಒಂದೊಂದನ್ನಾಗಿ ಜ್ಞಾಪಿಸಿಕೊಳ್ಳಲಾರಂಭಿಸಿದೆ........ಒಲೆ ತುಂಬ ಕೆಂಡ ಮಾಡಿ, ಒಂದನೇದರದಲ್ಲಿ ಅಕ್ಕಿ ನೀರು—ಅಲ್ಲ ಬೇಳೆ ನೀರು—ಅಕ್ಕಿ ನೀರೋ? ಬೇಳೆ ನೀರೋ? ಯೋಚನೆಗೆ ಈಡಾಯಿತು.. ಹೇಗಾದರೂ ಆಗಲಿ ಎಂದು ಬೇಳೆ ನೀರೆಂದು ನಿರ್ಧಾರಕ್ಕೆ ಬಂದೆ. ಕುಕ್ಕರ್ ಪಾತ್ರೇನ ಗಲ ಬರೆಸಿ ಬೇಳೆ ತೊಳೆದು ಒಂದನೇ ಪಾತ್ರೆಗೆ ಹಾಕಿದೆ. ಎರಡನೇದರಲ್ಲಿ ಅಕ್ಕಿ ನೀರುಹಾಕಿ ಒಗ್ಗರಣೆ ಸಾಮಾನನ್ನು ಮೂರನೇದಕ್ಕೆ ಹಾಕಬೇಕು—ಒಗ್ಗರಣೆ ಸಾಮಾನೇನು? ಅಲ್ಲ ಒಗ್ಗರಣೆನ ಇದರ ಜೊತೆಗೆ ಹಾಕಕೂಡದು, ಉಪ್ಪು ಹುಳಿ ಖಾರ ಇದರ ಜೊತೆಗೆ ಇಡಬೇಕು. ಅಲ್ಲ ಒಗ್ಗರಣೆ—ಅಲ್ಲ ಉಪ್ಪು ಹುಳಿ ಖಾರ, ಮನದಲ್ಲಿ ಹೋರಾಟ ನಡೆಯಿತು. ಹೋರಾಟ ಬಹಳ ರಭಸದಿಂದ ನಡೆದಿತ್ತು. ಅಡಿಗೆ ಮನೆಯಿಂದ 'ಬುಸ್' ಎಂಬ ಸದ್ದು ಕೇಳಬರದಿದ್ದರೆ ಹೋರಾಟ ಕೊನೆಗಾಣುತ್ತಲೇ ಇರಲಿಲ್ಲ. ಅಡಿಗೆ ಮನೆಗೆ ಹೋಗಿ ನೋಡಿದಾಗ ನನ್ನ ಹಣೆಯ ಮೇಲೆ ಬೆವರಿನ ಹನಿಗಳು ಮೂಡಿದ್ದುವು. ಮುಖ ಪೆಚ್ಚು ಬಡಿದಿತ್ತು—ಏಕೆಂದರೆ ಹಾಲು ಉಕ್ಕಿ ಹೋಗಿತ್ತು, ಈ ಅವಾಂತರಗಳಿಗೊಳಗಾದ ನನ್ನ ಜೀವ ಹಣ್ಣು ಹಣ್ಣಾಗಿತ್ತು. ಲಲಿತ ಊರಿಗೆ ಹೋದಾಗಿನ ಅನುಭವ ಮರೆಯುವ ಹಾಗಿರಲಿಲ್ಲ. ಹಾಲಿನ ಪಾತ್ರೆಯನ್ನು ಕೆಳಗಿಳಿಸಿದೆ. ತಳದಲ್ಲಿ ಕೊಂಚ ಹಾಲು ಉಳಿದಿತ್ತು.

ನನಗೆ ಜ್ಞಾಪಕವಿರುವಹಾಗೆ ಒಗ್ಗರಣೆ ಕಡೆಗೆ ಕೊಡುತ್ತಿದ್ದಳು; ಹೌದು, ಅದೇ ಸರಿ ; ಇದರ ಜೊತೆಗೆ ಉಪ್ಪು ಹುಳಿ ಖಾರ ಇಡಬೇಕು ; ಕಡೆಗೆ ಒಗ್ಗರಣೆ, ಎಂದು ನಿರ್ಧರಿಸಿ ಕುಕ್ಕರ್ ಪಾತ್ರೆಯನ್ನು ಒಲೆಯ ಮೇಲಿರಿಸಿದೆ. ಚಿಕ್ಕಮನೆ ಕಡೆ ಇಣಿಕಿ ನೋಡಿದೆ. ರಾಮು ಯಾವುದೋ ಕಾಗದದಲ್ಲಿ ಗಾಳಿ ಪಟ ಮಾಡುತ್ತಿದ್ದ. ಪದ್ದು ಅದನ್ನು ನೋಡುತ್ತಿದ್ದ.

"ಸಾಮಿ!" ಎಂದು ದೀನ ಧ್ವನಿ ಹೊರಗಿನಿಂದ ತೂರಿಬಂತು.

"ಯಾರಯ್ಯ ಅದು?" ಎಂದು ಅಲ್ಲಿಂದಲೇ ಅದಕ್ಕುತ್ತರ ಹೋಯಿತು. "ನಾನು ಪೀರ"—ನಮ್ಮ ಸಾಹೇಬರ ಮನೆ ಜವಾನ.

"ಒಳಕ್ಕೆ ಬಾರಯ್ಯ" ಎಂದೆ. ಬಂದವನು ಮೂಲೇಲಿ ನಿಂತುಕೊಂಡ. "ಏನಯ್ಯ ಬಂದದ್ದು?" "ಅದು ಯಾವುದೋ ಕಾದ್ಗ ಐತಂತಲ್ಲ ಸಾರ್ ಜಮಾಬಂದೀದು ರಿಕಾರ್ಡು! ಅದು ಬೇಕಂತೆ ಸಾಹೇಬರಿಗೆ" "ಓಹೋ ಅದೋ ಕೊಡ್ತೀನಿ ತಡಿ" ಎಂದು ನನ್ನ ರೂಮಿಗೆ ಹೋದೆ. ನನ್ನ ಮೇಜಿನ ಮೇಲಿನ ಕಾಗದ ಪತ್ರಗಳು ಈ ಹುಡುಗರ ಹಾವಳಿಗೀಡಾಗಿ ದಿಕ್ಕೆಟ್ಟು ಕಂಗೆಟ್ಟು ನಮಗಾರು ದಿಕ್ಕು ಎಂದು ಪೇಚಾಡುತ್ತಾ, ನೆಲದ ಮೇಲೆ ಬಿದ್ದಿದ್ದವು. ಅವುಗಳ ಸ್ಥಿತಿ ನೋಡಿ ನನಗೆ ರೇಗಿತು. ಪೀರನ ಸಹಾಯ ದಿಂದ ಎಲ್ಲಾ ಸರಿಪಡಿಸಿ ಹುಡುಕಲು ಅದರಲ್ಲಿ ಬೇಕಾದ ಕಾಗದ ಒಂದು ಬಿಟ್ಟು ಇನ್ನೆಲ್ಲಾ ಧಾರಾಳವಾಗಿ ಸಿಕ್ಕಿದವು. ನನಗೆ ಬೆಳಗಿನಿಂದ ಆದ ಪ್ರಕರಣಗಳು ತಲೆ ಚಿಟ್ಟು ಹಿಡಿಸಿದ್ದವು; ಇದು ಹುಚ್ಚು ಹಿಡಿಸಲು ಪ್ರಯತ್ನ ಮಾಡಿತು. ಆ ಜಮಾಬಂದಿ ರಿಕಾರ್ಡನ್ನು ನಾನೇ ತೆಗೆದು ಕೊಂಡು ಹೋಗಬೇಕಾಗಿತ್ತು; ಅಂಥಾದ್ದರಲ್ಲಿ ಅವರೇ ಹೇಳಿ ಕಳುಹಿಸಿದಾಗ ಕೊಡದಿದ್ದರೆ ಏನೆಂದುಕೊಂಡಾರು? ನನಗೆ ಏನೂ ತೋಚದಾಯಿತು. ಕಿಟ್ಟನೆ ಕಿರುಚುವ ಹಾಗಾಯಿತು. ಇದೆಲ್ಲಾ ಆ ಲಲಿತ ಊರಿಗೆ ಹೋದದ್ದರ ಫಲ.

"ಅಣ್ಣಾ, ಗಾಳಿ ಪಟ" ಎಂದು ಕುಣಿಯುತ್ತ ರಾಮು ಓಡಿಬಂದ. ಅವನ ಹಿಂದೆ ಪದ್ದು "ನಂಗೆ ಗಾಳಿ ಪಟ" ಎಂದು ಗೋಣಗುತ್ತಿದ್ದ. ಗಾಳಿ ಪಟ ರಾಮು ತನ್ನ ಬುದ್ಧಿಯನ್ನೆಲ್ಲಾ ಉಪಯೋಗಿಸಿ ಕಟ್ಟಿದ್ದು. ಕವಿಗೆ ಕಾವ್ಯದ ಹಾಗೆ, ಚಿತ್ರಗಾರನಿಗೆ ಚಿತ್ರದ ಹಾಗೆ, ರಾಮೂಗೆ ತನ್ನ ಗಾಳಿಪಟ. ಮಗನ ಕುಶಲತೆಯನ್ನು ನೋಡಿ ಆನಂದ ಪಡೋಣವೆಂದು ಗಾಳಿ ಪಟ ಕೈಗೆ ತೆಗೆದುಕೊಂಡೆ. ಮಗು ಚಿಕ್ಕವ, ಈಗಲೇ ಇವನಿಗೆ ಇಷ್ಟು ಬುದ್ಧಿ! ಇವನನ್ನು ಇಂಜಿನಿಯರನ್ನಾಗಿ ಮಾಡಬೇಕೆಂದು ಯೋಚನೆ ಮಾಡ ತೊಡಗಿದೆ. ಗಾಳಿ ಪಟ ದಿಟ್ಟಿಸಿ ನೋಡಿದೆ—ಹುಬ್ಬು ಗಂಟಿಕ್ಕಿತು, ಬಾಯಿ ಒಣಗಿತು, ಗಂಟಲು ಕಟ್ಟಿತು. ಏನೂ ತೋಚಲಿಲ್ಲ........ ರಾಮುನ ಕೋಮಲವಾದ ಕೆನ್ನೆಗೆ ನನ್ನ ಒರಟು ಕೈಯಿಂದ ಛಟೀರ್ ಎಂದು

ಹೊಡೆದೆ....ನನ್ನ ರೌದ್ರಾವತಾರ ಪೀರನಿಗೆ ಗೊತ್ತಾಗಲಿಲ್ಲ. ಅವನ ಟೋಪಿ ಗಡ್ಡ ಎರಡೂ ನಡಗುತ್ತಿದ್ದವು. ಪದ್ದು ರಾಮು ಇಬ್ಬರೂ ಅಳುತ್ತಿದ್ದರು. "ಥೋಡೋ ಸಾಬ್, ಕ್ಯಾ ಹುವ್ವ?" ಎಂದ ಪೀರ. ರಾಮೂನ ಕಲಾಕೃತಿ ಜಮಾಬಂದಿ ರಿಕಾರ್ಡಿನಿಂದ ನಿರ್ಮಿಸಿದ್ದೆಂದು ಆ ಸಾಬೀಗೇನು ಗೊತ್ತು? ಗಾಳಿ ಪಟ ಇನ್ನು ಹಸಿ ಇದ್ದುದರಿಂದ ಎಲ್ಲಾ ಹುಷಾರಾಗಿ ಕಿತ್ತು, ಜಮಾಬಂದಿ ರಿಕಾರ್ಡನ್ನು ಕೊಟ್ಟು ಕಳುಹಿಸಿದೆ. ಆದರೂ ಅದರಲ್ಲಿ ಕೊಂಚ ಭಾಗ ಮಾಯವಾಗಿತ್ತು. ಅದಕ್ಕಾಗಿ ನಾಳೆ ಸಾಹೇಬರಿಂದ ಬೈಗಳು, ಅಷ್ಟೆ.

ಇನ್ನು ಕುಕ್ಕರ್ ಕಡೆ ಮೆದಳು ಓಡತೊಡಗಿತು. ಆದರೆ ಪೂರ್ತಿ ಮೆದಳು ಓಡಲಿಲ್ಲ. ಅರ್ಧ ಮೆದಳು ಹುಡುಗರನ್ನು ಸಮಾಧಾನಪಡಿಸುವ ಮಾರ್ಗವನ್ನು ಹುಡುಕುತ್ತಿತ್ತು.

ಆಗಲೆ ಒಂದು ಗಂಟೆಯಾಗುತ್ತಾ ಬಂದಿತ್ತು. ನನ್ನ ಏಟು, ರೇಗು, ಹಸಿವುಗಳಿಂದ ಹುಡುಗರು ಬಹಳ ಬಳಲಿಹೋಗಿರುವಂತೆ ಕಂಡಿತು. ಏಕೆಂದರೆ ಸಮಾಧಾನಮಾಡಲು ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲವಾದವು. ಹೇಗಾದರೂ ಆಗಲಿ, ಊಟಕ್ಕಾದರೂ ಹಾಕೋಣವೆಂದು ಕುಕ್ಕರ್‌ನ್ನು ವಿಚಾರಿಸಿಕೊಳ್ಳಲು ಹೊರಟೆ. ಒಲೆ ಆರಿಹೋಗಿತ್ತು. ಅಡಿಗೆ ಆಗಿರ ಬಹುದೆಂದು ಇಳಿಸಿ ನೋಡಿದೆ–ಅಕ್ಕಿ–ಬೇಳೆ ನೀರು–ಎಲ್ಲಾ ಹಾಗೆ ಇದೆ.

ಆಕಾಶ ತಲೆ ಮೇಲೆ ಕಳಚಿಬಿದ್ದ ಹಾಗಾಯಿತು. ಹಾಲು ಉಕ್ಕಿ ಒಲೆ ಆರಿಹೋಗಿರಬೇಕು—ಅದರ ಮೇಲೆ ಕುಕ್ಕರ್ ಇಟ್ಟಿರಬೇಕೆಂದು ತರ್ಕ ಮಾಡಿದೆ. ಎಡಬಲದಲ್ಲಿ ಅಳುತ್ತಿರುವ ಹುಡುಗರು. ಮುಂದೆ ಬೇಯದ ಅನ್ನ. ನನ್ನ ಪಾಡು ನಾಯಿಪಾಡು. ಕಣ್ಣಲ್ಲಿ ನೀರು ಬರುವು ದೊಂದು ಬಾಕಿ. ಹೋಟಲಿನಿಂದ ಒಂದು ಕ್ಯಾರಿಯರ್ ಊಟ ತರಿಸಿ ಊಟದ ಶಾಸ್ತ್ರ ಮುಗಿಸಿದೆ. ಅಷ್ಟು ಹೊತ್ತಿಗೆ ಎರಡು ಗಂಟೆಯಾಗಿತ್ತು. ರಾಮು ಆ ಹೊತ್ತಿಗೆ ಆಗಲೆ ನಾಲ್ಕು ಸಲ ಅಮ್ಮ ಯಾವಾಗ ಬರ್‍ತಾಳೆಂದು ಪೀಡಿಸಿದ್ದ. ಇನ್ನೇನು ಸಂಜೆಗೆ ಬಂದುಬಿಡುವಳೆಂದು ಸಮಾಧಾನ ಪಡಿಸುತ್ತಿದ್ದೆ. ಅವನೂ ಪದ್ದು ಹತ್ತಿರ ಹೀಗೇನೆ ಹೇಳುತ್ತಿದ್ದ.

ಸಂಜೆ—ರೈಲು ಬರುವ ಹೊತ್ತು. ನಾನು, ರಾಮು, ಪದ್ದು ರೈಲಿನಲ್ಲಿ ಲಲಿತ ಬರುತ್ತಾಳೆಂದು ಕಾಯುತ್ತಾ ನಿಂತಿದ್ದೆವು........ರೈಲು ಬಂತು, ಎಲ್ಲರೂ ಬಂದರು. ಲಲಿತ ಕಾಣಲಿಲ್ಲ. ಅಂಗಡಿ ಶಿವಪ್ಪ ಮಾತ್ರ ಒಂದು ಕಾಗದವನ್ನು ನನ್ನ ಕೈಯಲ್ಲಿಟ್ಟು ಹೊರಟುಹೋದ. ಬೆಂಗಳೂರು ಸ್ಟೇಷನ್‌ನಲ್ಲಿ ಯಾರೋ ಅವನ ಕೈಯಲ್ಲಿ ಕೊಟ್ಟರಂತೆ.

"........ಗೆ, ರತ್ನಳನ್ನು ಆ ಹುಡುಗ ಒಪ್ಪಿದ, ಇಷ್ಟರಲ್ಲೇ ಮುಹೂರ್ತ ಇಡಿಸುತ್ತಾರೆ. ರಾಜುಗೆ ಇವತ್ತು ರಾತ್ರಿ ಆರತಿ. ಸಂಜೆಗೆ ಹೇಗೆ ಬರೋಕಾಗುತ್ತೆ ? ನೀವೆ ಹೇಳಿ. ಅವಸರದಲ್ಲಿ ಬರೆದದ್ದು—ರಾಮು, ಪದ್ದುನ್ನ ಅಳಿಸಬೇಡಿ, ಅತ್ತರೆ ಕಪಾಟಿನಲ್ಲಿರೋ ತಿಂಡಿ ಕೊಡಿ. ನಾಳೆ ಸಂಜೆಗೆ ಖಂಡಿತ ಬಂದುಬಿಡುತ್ತೇನೆ.

ಮನಸ್ಸಿಗೇನೂ ತಿಳಿದುಕೊಳ್ಳಬೇಡಿ. ಅಷ್ಟಕ್ಕೂ ನೀವು ಹಾಗೆ ತಿಳಿದುಕೊಳ್ಳುವವರಲ್ಲವೆಂಬುದು ನನಗೆ ಗೊತ್ತು. ಇನ್ನೇನು ಹೆಚ್ಚಿನ ಸಮಾಚಾರವಿಲ್ಲ.

ಇತಿ ನಿಮ್ಮ ನಚ್ಚಿನ,
**ಲಲಿತ.** "

ಈ ಕಾಗದವನ್ನೋದುತ್ತಲೆ ನನಗೆ ಎಡಗಾಲಿಗೆ ಮುಂಡರಗಪ್ಪೆಯೂ, ಬಲಗಾಲಿಗೆ ನಾಗರಹಾವೂ, ಒಂದು ಕೈಗೆ ಗುಂಡಿನೇಟೂ, ಏಕಕಾಲದಲ್ಲಿ ಬಡಿದ ಹಾಗಾಯಿತು. ಅವಳನ್ನು ಏನು ಮಾಡಲಿ? ಎನಿಸಿತು. ಕೈಲಿದ್ದ ಕಾಗದಾನ ಹರಿದುಹಾಕಿದೆ. ಸದ್ಯಕ್ಕೆ ಇನ್ನೇನೂ ಸಾಧ್ಯವಿರಲಿಲ್ಲ.



# ಶಾಮಣ್ಣನ ಸಂಭ್ರಮ



"ರಜಾ ಕೊಡೋದಿಲ್ಲವಯ್ಯಾ—ಖಂಡಿತ ಆಗೋದಿಲ್ಲ" ಎಂದು ಮ್ಯಾನೇಜರು ಖಡಾಖಂಡಿತವಾಗಿ ಹೇಳಿದ್ದು ಶಾಮಣ್ಣನಿಗೆ, ರೇಷನ್ ಕಾರ್ಡು ರಿಜಿಸ್ಟರಾಗಿದ್ದು ತನ್ನ ಸರದಿ ಬರುವ ವೇಳೆಗೆ ಮುಗಿದು ಹೋದ ಇದ್ದಲು ಮೂಟೆಯ ಸಮಾಚಾರದಂತಾಗಿಹೋಯಿತು. ವೆಂಕಟಶಾಮಿಗೆ ಆಗತಾನೆ 'ಅಸ್ತು' ಅಂದವರು ತಾನು ಹೋದಾಗ ಗಸ್ತು ಕೊಟ್ಟರಲ್ಲಾ ಎಂದು ಪ್ರಾಣಿ ತಳಮಳಿಸಿದ. ಕೆಲಸಕ್ಕೆ ರಾಜೀನಾಮೆ ಕೊಡುವತನಕ ಕೋಪ ಏರಿತ್ತು. ಆದರೆ ಅಷ್ಟರಲ್ಲಿ ಸಮಾಧಾನ ತೆಗೆದುಕೊಂಡುಬಿಟ್ಟ. ಇಲ್ಲದಿದ್ದರೆ, ತನ್ನ ಮೇಲೆ ಗರಂ ಆಗಿರುವ ಮ್ಯಾನೇಜರು ರಾಜೀನಾಮೆಗೂ ಅಸ್ತು ಎಂದುಬಿಡುವರೆಂದು ಅವನು ಬಲ್ಲ. ಇನ್ನೇನು ಮಾಡಿಯಾನು ಕಟ್ಟಿಗೆ ಡಿಪೋಗೆ ಹೋಗಿ ಹ್ಯಾಪು ಮೋರೆ ಹಾಕಿಕೊಂಡು ಬಂದವನ ಕಳೆ ಮುಖಕ್ಕೆ ಮೆತ್ತಿಕೊಂಡು ತನ್ನ ಕುರ್ಚಿಯಲ್ಲಿ ಕುಕ್ಕರಿಸಿದ. ಕಟ್ಟಿದ ಕನಸೆಲ್ಲಾ ಕದಡಿಹೋಯಿತು.

ಈ ಮ್ಯಾನೇಜರುಗಳಿಗೆ ಈ ಪರಿಸ್ಥಿತಿ ಬಂದರೆ ಗೊತ್ತಾಗುತ್ತದೆ. ಯಾರು ಇವನಿಗೆ ಕೆಲಸಕೊಟ್ಟರೋ. ಬೇಕಾದಾಗ ತಾನು ಹೋಗುತ್ತಾನೆ–ನಮಗೆ ಬೇಕೂಂತ ಅಂದಾಗ ಸತಾಯಿಸ್ತಾನೆ" ಎಂದು ಶಾಮಣ್ಣ ಮಾನೇಜರನ್ನಬೈದ. ಇದೇ ಸಮಯಕ್ಕೆ ರಜಾ ಸಂಪಾದಿಸಿದ್ದ ವೆಂಕಟಶಾಮಿ ತಲೆಗೆ ಟೋಪಿ ಸೇರಿಸುತ್ತಾ "ಶಾಮಣ್ಣ ಕೀಲು ತಿರುಪ್ನೋಕಡೆ ತಿರುಗಿಸ ಬೇಕಯ್ಯಾ–ಮ್ಯಾನೇಜರ್ ಸ್ವಂತ ಗುಮಾಸ್ತೆ (Personal Clerk) ನ ಹಿಡಿ. ಇರೋ ಸಮಾಚಾರ ಒರಲು, ದೇವರಿದ್ದಾನೆ" ಎಂದು ತಿರುಪು ಇರೋ ಜಾಗ ತೋರಿಸಿ ಹೊರಟುಹೋದ.

ಕೆಲಸಕ್ಕೆ ಹೊಸದಾಗಿ ಸೇರಿದ ಶಾಮಣ್ಣನಿಗೆ ತಿರುಪು ಎಲ್ಲಿದೆ ಎಂದು ಗೊತ್ತಿದ್ದರೂ ಆ 'ಸ್ವಂತ ಗುಮಾಸ್ತೆಯ' ಅಹಂಭಾವಕ್ಕೆ, ಅವಳ ಏಕಾಂಗಿತ್ವಕ್ಕೆ ಹೆದರಿ ಅವಳನ್ನು ಹೆಚ್ಚು ಮಾತನಾಡಿಸುತ್ತಿರಲಿಲ್ಲ. ಆದರೆ ಈಗ ನಿರ್ವಾಹವಿಲ್ಲದೆ ಹೋಯಿತು. ಆ ಮೂಗ ತುದಿ ಕನ್ನಡಕದ ಸಿಂಬೆವಂತಳಿಗೆ ಹಲ್ಲುಕಿರಲಿ ಕೈಜೋಡಿಸಬೇಕಾಯಿತೇ ಎಂದು ಶಾಮಣ್ಣ ಮಮ್ಮಲನೆ ಮರುಗಿದ. ಕಾಲವಿಳಂಬನೆಗೆ ಅವಕಾಶವಿರಲಿಲ್ಲ. ನಾಡಿದ್ದು ಹೊರಡಲೇಬೇಕು. ಇನ್ನೊಮ್ಮೆ ಮಾವನವರ ಪತ್ರಕ್ಕೆ ಕೈಹಾಕಿದ. ಎಷ್ಟು ಸಲ ಓದಿದರೂ "ಒಂದು ವಾರಕ್ಕೆ ಮುಂಚೆಯೇ ಬರಬೇಕು"........ಎಂಬ ಈ ಮಾತುಗಳೇ ಕಾಣಿಸುತ್ತಿದ್ದವು. ಕಡೆಗೆ 'ಸ್ವಂತಗುಮಾಸ್ತೆ'ಯ ಕೃಪಾಕಟಾಕ್ಷಕ್ಕೊಳಗಾಗದಿದ್ದರೆ ಬೇರೇ ಮಾರ್ಗವೇ ಕಾಣಿಸದಾಯಿತು..... ೪ ದಿನ ರಜ ಕೊಡಿಸಿದರೆ ಸಾಕು ಕೋಡಗನಿಗಾದರೂ ಕಾಲಿಗೆ ಬೀಳೋಣವೆಂದು ತೀರ್ಮಾನಮಾಡಿದ. ಮತ್ತೆ ನೀಲಾಕಾಶದಲ್ಲಿ ಚಂದ್ರ ಮೂಡಿದ, ತಂಗಾಳಿ ಸುಯಿಗುಟ್ಟಿತು. ಸುಗಂಧ ಮೂಗಿಗಡರಿತು ಕ್ರಾಪು ತಾನೇ ತೀಡಿಕೊಂಡಿತು. ಆ ಗುಮಾಸ್ತೆ ಮನಸ್ಸು ಮಾಡಿದರೆ ರಜ ಸಿಕ್ಕುವುದು ಖಂಡಿತ ತಾನು ತನ್ನ ಇನಿಯಳೊಡನೆ ೪ ದಿನ ನಲಿಯುವುದು ಖಂಡಿತ ಎಂದು ಶಾಮಣ್ಣ ಹಿಗ್ಗಿದ. ಅವನ ಕತ್ತಲು ಪ್ರಪಂಚದಲ್ಲಿ ಮೋಂಬತ್ತಿಯೊಂದು ಕಾಣಿಸಿಕೊಂಡಿತು.

"ನನ್ನ ವಿಶಾಲಾಕ್ಷಿ ನನಗಾಗಿ ಕಾಯುತ್ತಿರುತ್ತಾಳೆ. ಮೊದ ಮೊದಲು ನಾಚಿಕೆಯಿಂದ ಮಾತಾಡಲು ಹಿಂಜರಿಯುತ್ತಾಳೆ. ನಾನೂ

ಮೊದಲು ಗಂಭೀರವಾಗೇ ಇರಬೇಕು. ಕಾಫಿ ಕೊಡಲು ಬರುತ್ತಾಳೆ. 'ನೀನು ಕೊಂಚ ತೆಗೆದುಕೊ' ಎಂದು ಪ್ರಾರಂಭಿಸಬೇಕು. 'ಆಯಿತು' ಎಂದು ಹೇಳುವಾಗ ನಸುನಾಚಿ ಕೆಳತುಟಿ ಕಚ್ಚಿಕೊಂಡು ತಲೆ ಬಾಗಿಸಿ ನಾಚಿಕೆಯಿಂದ ಹಣೆಯಮೇಲೆ ಬೆವರು ಹನಿ ಮೂಡಿ ಎರಡು ಕೆನ್ನೆಗಳೂ ಕೆಂಪಡರುತ್ತದೆ. ಆಗ ನೋಡಬೇಕು ನನ್ನ 'ಚಿಗರಿಗಂಗಳ ಚೆಲುವಿನಾ'. 'ಆದರೇನಂತೆ....ಇನ್ನೂ ಕೊಂಚ ಆಗಲಿ' ಎಂದು ಇಷ್ಟರಲ್ಲಿ ನಾನು ಒಂದು ಸಲ 'ಸುರ್' ಎನಿಸಿದ ಲೋಟಾ ಅವಳ ಮುಂದೆ ಹಿಡಿಯಬೇಕು. 'ಊಹೂಂ....' ಎಂದಿಷ್ಟೇ ಅಂದು ಓಡಿ ಅಡಿಗೆ ಮನೆ ಸೇರಿಬಿಡುವಳು. 'ಪಾಪ ಹೊಸ ಪರಿ ಇನ್ನೂ ಲಜ್ಜೆ' ಎಂದು ನಾನು ಇದ್ದ ಕಾಫಿನೆಲ್ಲಾ ಬಸಿ ಯಲೇ ಬೇಕು.........ಊಟದ ನಂತರ ತಾಂಬೂಲದ ತಟ್ಟೆ ಹಿಡಿದು ಮದಗಜಗಮನೆ-ತುಂಬುರೆಪ್ಪೆಯ ವಿಶಾಲಾಕ್ಷಿ ಕಡೆಗಣ್ಣಿಂದ ಕದ್ದು ನೋಡುತ್ತಾ-ನನಗೆ ತೋರಿಸಲೆಂದೇ ಜರಿ ಅಂಚಿನ ಕುಪ್ಪಸ ಗೀರುಗೀರಿನ ತೆಳ್ಳನೆಯ ಹಸುರುಮಿನುಗುಗಳಿರುವ ಸೀರೆ ತುಂಬಾ ನೆರಿಗೆ ಹಾಕಿ ನಮೂನೆ ಯಾಗಿ ಉಟ್ಟುಕೊಂಡು ನನ್ನ ಬಳಿ ಸಾರುವಳು. ನಾನು ನೋಡಿ ನೋಡ ದಂತೆ ಇದ್ದುಬಿಡುವೆ. ಆ ಮಿನುಗುವ ಲೋಲಾಕುಗಳನ್ನು ಅದರ ಮೇಲಿನ ಕಿವಿಯನ್ನು ಆಡರಿರುವ ಹಾರುವ ಮುಂಗುರುಳನ್ನು ಸರಿಪಡಿಸಿಕೊಳ್ಳುತ್ತಾ, ಓರಣವಾಗಿ ಕುಳಿತು ನರ್ತಕನ ಬೆರಳಿನಂತೆ ಎಲೆಗೆ ಸುಣ್ಣ ಹಚ್ಚುವ ಬೆರಳು ಓಡಾಡುವುದು. ಆಗ ಆ ಹಗಳಿನ ಉಂಗುರ ಥಳಕ್ ಎಂದು ಹೊಳೆಯುವುದು.

'ನಿನ್ನ ಉಂಗುರ ಇನ್ನೂ ಎಷ್ಟು ಚೆನ್ನಾಗಿದೆ; ಮಾಸದೆ ಇದೆ ಯಲ್ಲಾ' ಎಂದು ಇಷ್ಟುದಿನ ಸಂದೂಕದಲ್ಲೇ ಅಡಗಿ ಇಂದು ಬೆರಳನ್ನು ಅಲಂಕರಿಸಿದೆ ಎಂದು ಗೊತ್ತಿದ್ದೂ ಆ ಪ್ರಶ್ನೆ ಹಾಕುತ್ತೇನೆ. ಬಳುಕಿ ಕತ್ತು ಕೊಂಕಿಸಿ ನನ್ನ ಉಂಗುರ ನೋಡುತ್ತಾಳೆ. ಆಗ ನಾನು 'ಎಲ್ಲಿ ಉಂಗುರ ನೋಡೋಣಾ' ಎಂದು ಮೆಲ್ಲಗೆ ಅವಳ ಕೈಹಿಡಿಯುತ್ತೇನೆ. ಮೊದಲು ಕೊಂಚ ಕೊಸರಿಕೊಂಡು ಆಮೇಲೆ ಸುಮ್ಮನಿರುತ್ತಾಳೆ. ಅವಳ ಬೆರಳುಂಗುರ ನನ್ನ ಕೈಗೆ ಬರುತ್ತೆ. ಅದನ್ನು ನನ್ನ ಕಿರುಬೆರಳಿಗೇರಿಸಿ, 'ನನ್ನ ಉಂಗುರ ನಿನ್ನ ಬಳಿ ಇರಲಿ' ಎಂದು ನನ್ನ ಉಂಗುರ ಅವಳಿಗೆ ಕೊಡು ತ್ತೇನೆ. ಇಷ್ಟರತನಕ ಅವಳು ಏನೂ ಮಾತನಾಡಿರುವುದಿಲ್ಲ. ಒಳ್ಳೇ

ಬೀಡಾ ತಯಾರಾಗಿರುತ್ತದೆ....ಪಾಪ ಅವಳಿಗೆ ನಾಚಿಕೆ–ನಾನೇ ಕೈಮಾಡಿ ಬೀಡ ಸವಿದುಬಿಡುತ್ತೇನೆ.....ಅಹಹ ಎಷ್ಟು ಚೆನ್ನಾಗಿರುತ್ತೆ" ಎಂದು ರಜಾ ಮಂಜೂರಾಗುವ ಮುನ್ನವೇ ತನ್ನ ರಜಾ ಚೀಟಿ ಹಿಡಿದು ಗುಮಾಸ್ತೆಯ ಕುರ್ಚಿಯ ಬಳಿ ಸಾರಿದ.

ವಿನಯವಾಗಿ ಬಾಗಿ ಕೋಟಿನ ಗುಂಡಿ ಹಾಕುತ್ತಾ ಚೀಟಿ ಅವರ ಮುಂದಿಟ್ಟ. "ಏನ್ರಿ....ನೀವೇ ಕೇಳ್ತಾ ಇದ್ರಿ ಸಾಹೇಬರನ್ನ ನಂದಿನ್ನೋ ನಿದೆ" ಎಂದು ಆ ಗುಮಾಸ್ತೆ ಗುರುಗುಟ್ಟಿದ. ಮೊದಲೇ ತನ್ನ ಕೇಳದೇ ನೇರವಾಗಿ ಹೋದನಲ್ಲಾ ಎಂಬ ಸಿಟ್ಟು ಆ ಕನ್ನಡಕದ ಕಟ್ಟಿನಲ್ಲಿ ಹೊರ ಹೊಮ್ಮುತ್ತಿತ್ತು. ಅದೆಲ್ಲಾ ಮನಸ್ಸಿನಲ್ಲಿಡಬೇಡಿ ಸಾರ್....ಸಮಾಚಾರ ಇಷ್ಟೆ!" ಎಂದು ತನ್ನ ಮೊದಲ ದೀಪಾವಳಿ ಸಂಭ್ರಮದ ಚಿತ್ರಾನ ಆ ಗಡ್ಡ ನೆರೆಯುತ್ತಾ ಬಂದ ಗುಮಾಸ್ತರ ಮುಂದೆ ಚಿತ್ರಿಸಿದ. ಅವರಿಗೂ ತಮ್ಮ ಮೊದಲ ದೀಪಾವಳಿ ನೆನಪಿಗೆ ಬಂದಿರಬೇಕು. ನಕ್ಕು...."ಹುಡುಗಾ ಇಷ್ಟೇನೆ" ಎಂದು ಚೀಟಿ ಕೈಗೆ ತೆಗೆದುಕೊಂಡರು. ಶಾಮಣ್ಣ ಹಕ್ಕಿಯಂತೆ ಹಾರಾಡಿದ, ನಕ್ಕ, ಏನೇನೋ ಮಾಡಿದ. ವಿಶಾಲಾಕ್ಷಿಯ ವಿಶಾಲಕಣ್ಣು ಕಣ್ಣಿಗೆ ಕಟ್ಟಿದಂತಾಯಿತು. ಹಾಗೇ ಕುಸಿದು ಕುಳಿತ.

"ವಿಶಾಲು, ನಾನು ಎರಡನೇ ದಿನ ಸಿನಿಮಾಕ್ಕೆ ಹೋಗಬೇಕು. ವಿಶಾಲು ತೆಳ್ಳನೆಯ ತಿಳಿ ನೀಲಿಯ ಅಗಲಪಟ್ಟಿ ಅಂಚಿನ ಸೀರೆ ಉಟ್ಟು, ಗುಬ್ಬಳಿ ತೋಳಿನ ಬ್ಲೌಸು, ಅದೇ ತಿಳಿನೀಲಿಯ ರಿಬ್ಬನ್ನು ಜಡೆಯ ತುದಿಗೆ–ಎರಡು ಪಟ್ಟಿ ಚಪ್ಪಲಿ. ಗಮಗಮಿಸುವ ಸುಗಂಧರಾಜನ ಗೊಂಚಲು ಮುಡಿಗೆ. ನಾನು ಗ್ರೇ ಪ್ಯಾಂಟು ಆಡ್‌ಕೋಟು ಸಿಂಪಲ್ ಫೂ....ವಿಶಾಲುಗೆ ಕೊಂಚ ಸಲಿಗೆ ಬಂದಿರುತ್ತೆ. ಹೊಲಿಗೆ ಕೆಲಸ ಉಲನ್ ಹೆಣಿಗೆ, ಒಪ್ಪು ಓರಣದ ವಿಷಯ ಹೇಳುತ್ತಾಳೆ. 'ಕಾಗದಾ ಬರೆಯಲು ಸಂಕೋಚವೇಕೆ' ಎಂದು ಗಂಡಹೆಂಡಿರ ಪ್ರೇಮಮಯ ಜೀವನ ಸುಗಮವಾಗಿ ನಡೆಯಬೇಕಾದರೆ ಪತ್ರವ್ಯವಹಾರ ಅತ್ಯಗತ್ಯವೆಂದು ಸಾರಿ ಹೇಳುತ್ತೇನೆ. 'ಕ್ಷಮಿಸಿ ಇನ್ನು ಮೇಲೆ ಖಂಡಿತ ಬರೆಯುತ್ತೇನೆ' ಎಂದು ನಸುನಾಚಿ ಉಸುರುವಳು. ವಿಶಾಲು....ನನ್ನ ವಿಶಾಲು...." ಎಂದು ಶಾಮಣ್ಣ ಕನವರಿಸಿದ. ಎಲ್ಲಾ ಮನೋರಾಜ್ಯದಲ್ಲೇ ತನ್ನ ಮೊದಲು ದೀಪಾವಳಿಯು

ರೂಪುಗೊಂಡಿತು. 'ಮದುವೆಯಲ್ಲಿ ಹಿಡಿದ ಕೈ–ಕೋಮಲಸ್ಪರ್ಶ ನಿಜವಾಗಿ ಎಂದು ವಿಶಾಲಾಕ್ಷಿಯನ್ನು ಕಂಡೇನೋ' ಎಂದು ತಿಂಗಳಿಂದ ಹಂಬಲಿಸು ತ್ತಿದ್ದುದು ನಿಜವಾಗಿ ಸಂಭವಿಸುವುದು ತೀರಾ ಹತ್ತಿರಕ್ಕೆ ಬಂದುದಕ್ಕಾಗಿ ಹಿಗ್ಗಿ ಹಿರೇಕಾಯಿಯಾದ.

ಅದೂ ಇದೂ, ಅವನದೂ ಇವನದೂ ಒಳ್ಳೆಯ ಬಟ್ಟೆಗಳನ್ನು ಸೇರಿಸಿ, ವಿಶಾಲೂಗೆ ನಮೂನೆಯ ಬಳೆಗಳು, ಬಟ್ಟೆ ಸುಗಂಧಿರಾಜನ ಹೂ ಹೊತ್ತು ಹಾಸನದ ರೈಲು ಹತ್ತಿದ. ರೈಲು ಬಹುನಿಧಾನವೆಂದು ಅವನ ವಾದ. ಹಾಸನ ಬಹು ದೂರವೆಂದು ಚಿಂತೆ. ಯಾವಾಗ ಹಾಸನ ಬಂದೀತೂ, ರಂಗರಾಯರ ಮನೆ ಬಂದೀತೂ, ವಿಶಾಲಾಕ್ಷಿಯನ್ನು ನೋಡೇನು. ವಿಶಾಲು ಕದ್ದು ಬಾಗಿಲ ಸಂದಿನಿಂದ ನೋಡುತ್ತಿರುತ್ತಾಳೆ. ಆ ತಮಾಷೆ ಗೇಲಿ........ಕಡೆಗೂ ಕೇಳಿ ಬಂತು ಪೋರ್ಟರಿನ ಕೂಗು– 'ಹಾಸನ' 'ಹಾಸನ' ಮಾವಂದಿರೂ. ಆದರದಿಂದ ಎದುರುಗೊಂಡರು. ಗಾಡಿ ಮನೆಸೇರಿತು.

"ಎಲ್ಲಾ ಆರೋಗ್ಯ ತಾನೆ"

"ಮೂರೇ ದಿನ ರಜ....ರಜ ಸಿಗೋದೇ ಕಷ್ಟ.....ಎಲ್ಲಾ ಆರೋಗ್ಯ" ಬರೀ ಆರೋಗ್ಯದ ಮಾತು–ಬರೀ ಹುಡುಗರು. ವಿಶಾಲು ಸುಳಿವೇ ಇಲ್ಲ....? ? ? ಶಾಮಣ್ಣನಿಗೆ ತುಂಬಾ ಯೋಚನೆಗೀಡಾಯಿತು. ಕಡೆಗೂ ಸಿಕ್ಕಳು ವಿಶಾಲಿ ತಂಗಿ ಮೀನಾಕ್ಷಿ....ಶಾಮಣ್ಣ ಕೇಳಿದ ಗದ್ಗದ ಸ್ವರದಲ್ಲಿ– ಆ ಕಡೆ ಈ ಕಡೆ ನೋಡಿ.

"ಮೀನೂ ನಿಮ್ಮಕ್ಕ ಎಲ್ಲಿ ?...." ಅಂತ.

"ಭಾವ ಅಕ್ಕ ಹೊರಗೆ ...ಇವತ್ತು ಮು...." ಎಂಬ ಸಿಡಿಲಿನಂತೆ ಬಂತು ಉತ್ತರ.

ಶಾಮಣ್ಣ ಕುಸಿದು ಬಿದ್ದ–ಕಣ್ಣಿಗೆ ಭೋಳೆ ಬಂದಂತಾಯಿತು........ ತಲೆ ತಿರುಗಿದಂತಾಯಿತು.....ಮೀನಾಕ್ಷಿ ಭಾವಾ ಎಂದು ಕೂಗಿದಳು..... 'ಸಪ್ತ ಸಮುದ್ರ ದಾಟಿ ಸಂಜೀವಿನಿ ಪರ್ವತಕ್ಕೆ ಹೋದರೆ ಸಂಜೆಯಾಗಿದೆ ಸಂಜೀವಿನಿ ಸಿಗೋದಿಲ್ಲಾಂತ ಅಂದರಂತೆ' ಅನ್ನುವ ಸಮಾಚಾರ ಮೀನು ಗೇನು ಗೊತ್ತು ?



# ಗೃಹಪ್ರವೇಶ

ಕನ್ಯಾ ಸೆರೆ ಬಿಡಿಸಿ ಕೃತಾರ್ಥನಾಗಬೇಕೆಂದು ಕಂಡಕಂಡವರಿಗೆಲ್ಲಾ ಕೈ ಮುಗಿದು, ಹಲ್ಲುಕಿರಿದು, ತಿರುಪತಿ ತಿಮ್ಮಪ್ಪನಿಗೆ ಹರಕೆ ಹೊತ್ತು, ಪಟ್ಟ ಶ್ರಮ ಸಾರ್ಥಕವಾಯಿತೆಂದು ಆನಂದಾಶ್ರು ಮೂಡಿದ್ದು, ಮಗಳೂ, ಅಳಿಯದೇವರೂ ಹಸೆಮೇಲೆ ಕೂತ ಮೇಲೆ, ಒಬ್ಬಳೇ ಮಗಳೆಂದು ಮುದ್ದಿನಿಂದ ಸಾಕಿದ ಕುನ್ನಿಯ ಕಲ್ಯಾಣ ಕಂಡು, ಅಯ್ಯಂಗಾರ್ಯರು ಹಿಗ್ಗಿ ಹೀರೇಕಾಯಿ ಆದರು. ಆಸ್ತಾನ ಈಸ್ತಾನಗಳ ಜಗಳ ಪರಿಹರಿದು, ಕೈಗೆ ಸಿಕ್ಕ ಸ್ವರಾಜ್ಯವನ್ನು ಜೇಬಿನಲ್ಲಿಟ್ಟುಕೊಂಡು ಎಗರಾಡುವ 'ಹಿಂದೂಸ್ತಾನಿ' ಯಂತೆ ಮೆರೆದರು ಸೀತಾಪತ್ಯೈಯ್ಯಂಗಾರ್. ಯುದ್ಧಕಾಲದ ಎಲ್ಲಾ ಸ್ಟೇರ್ಷ ಮಾಸ್ಟರುಗಳಂತೆ ಇವರೂ ಸದಾ ಕೈಬೆಚ್ಚಗೆ ಮಾಡಿಕೊಂಡವರಾದ್ದರಿಂದ ಎರಡು ಸಾವಿರ ವರದಕ್ಷಿಣೆ, ನೂರಾರು ರೂಪಾಯಿನ ಬೆಳ್ಳಿಪಾತ್ರೆ ಪಡಗ, ಸೂಟುಗೀಟು ಇತ್ಯಾದಿ ಧಾರಾಳವಾಗಿ ತೆತ್ತಿದ್ದರೂ ಹುಡುಗಿ ಸೌಖ್ಯ ನೋಡಿ, ಅವಳು ಹೇಳಿದ ಹಾಗೆ ಕೇಳಿಕೊಂಡಿರೋ ಹುಡುಗನನ್ನು ಆರಿಸಿ ಹುಡುಕಿದ್ದು ಅವರಿಗೆ ಸಮಾಧಾನವನ್ನುಂಟುಮಾಡಿತ್ತು.

ಬೀಗರು ಬಹಳ ಬಿಗಿವಂತರು. ಬಹು ಟೇಕೆ, ಬಹು ಟೇಕೆ. ಅದಕ್ಕೇಂತ ತೋರುತೆ ಅಲಮೇಲಜ್ಜಿ ಸದಾ ಬಡ್ಕೊಳ್ತಿದ್ದಿದ್ದು "ಬೇಡಾ—

ಕೊಡಬೇಡಾ . . . . ಟೀಕಾಚಾರ್ರ ಗೋತ್ರದವರ ಮನೆಗೆ ಖಂಡಿತಾ ಹೆಣ್ಣು ಕೊಡಬೇಡಾ" ಅಂತ. ಎಲ್ಲಿ ಬೀಗರಿಗೆ ಉಪಚಾರ ಸಾಲದಾದೀತೋ, ಎಲ್ಲಿ ಏನು ಪ್ರಮಾದವಾದೀತೋ ಎಂದು ಪರದಾಡುತ್ತಿದ್ದ ಪ್ರಾಣಿಯನ್ನು ನೋಡಿದರೆ ಪರಿತಾಪಪಡುವಂತಾಗುತ್ತಿದ್ದಿತು. ಆದರೂ ಮಗಳು ಮದುವೆ ಕಂಡಳಲ್ಲಾ ಮನೆಗೊಂದು ಅಳಿಯ ಬಂತಲ್ಲಾ ಎಂಬ ಮರಿ ಮಿಂಚು ಹೊಳೆಯುತ್ತಿತ್ತು ಆ ಪೊರಕೆ ಹುಬ್ಬುಗಳಿಂದ ರಕ್ಷಿಸಲ್ಪಟ್ಟ ಕಣ್ಣುಗಳಲ್ಲಿ. ಸದಾ "ಎನ್ನಾಂಗೋ ಎಲ್ಲಾ ಸರಿಯಾ ಇರ್ಕದಾ" ಎಂಬ ಕನ್ನಡೋಮಿಳುಪಚಾರ ಮಾಡುತ್ತಲೇ ಇದ್ದರು ಬೀಗರಿಗೆ.

ಮದುವೆ ಎಲ್ಲಾ ಸಂಭ್ರಮದಿಂದ ಸಾಗಿತ್ತು. ತಾಳಿ ಬಿಗಿಯುವ ಸಮಾರಂಭ ಮುಗಿದಿತ್ತು. ಉರುಟಣೆ, ಹೆಣ್ಣು ಗಂಡುಗಳು ಪರಸ್ಪರ ಹೆಸರು ಹೇಳುವಿಕೆ. ಹೆಣ್ಣು ದಿಟ್ಟತನದಿಂದ, ನರಸಿಂಹ ಅಯ್ಯಂಗಾರ್ I.M.F. (Intermediate Many-times Failed) ಎಂದು ಹೇಳಿ ನಗೆಯ ಹೊನಲಿನಲ್ಲಿ ಮುಳುಗಿಸಿದ್ದು, ಗಂಡು ಹೆಂಡತಿ ಹೆಸರು ಹೇಳಲು ನಾಚಿ ನಸುಗುನ್ನಿ ಕಾಯಿಯಂತೆ ಆದದ್ದು ಎಲ್ಲಾ ಮುಗಿದಿತ್ತು. ನೇಗಲು ಹೊತ್ತು–ಗಂಡು, ಬಸವಣ್ಣನಂತೆ ದುಡಿದು ಎಲ್ಲದಕ್ಕೂ ತಲೆಹಾಕಿ ಹೂಂ ಗುಟ್ಟುವೆನೆಂದೂ ; ಹೆಣ್ಣು, ಹಸುವಿನಂತೆ ಮನೆಯಲ್ಲೇ ಸಾಧುವಾಗಿ ಗಂಡನನ್ನು ಪಳಗಿಸುವೆನೆಂದೂ, ಶಾಸ್ತ್ರೋಕ್ತವಾಗಿ ಪ್ರಮಾಣಮಾಡುವ ಸಂಭ್ರಮವೂ ಮುಗಿದಿತ್ತು. ಇನ್ನು ಉಳಿದಿದ್ದು ಗೃಹಪ್ರವೇಶ ಶಾಸ್ತ್ರ. ಹೆಣ್ಣನ್ನು ಗಂಡಿಗೊಪ್ಪಿಸುವ ಶಾಸ್ತ್ರ. ಮನೆ ತುಂಬಿಸುವಾಗ ಯಾವ ತಂದೆ ತಾಯಿಗಾದರೂ ದುಃಖ ಉಕ್ಕಿ ಬರುತ್ತದೆ. ಅಂದಮೇಲೆ ೨೦ ವರ್ಷ ಅಜಾನುಬಾಹುವಾಗಿ ಉದ್ದಗೆ, ಕರ್‍ರಗೆ, ದಪ್ಪಗೆ ಬೆಳಸಿದ ಬಾವುಗವನ್ನು ಗಂಡನ ಮನೆಗೆ ಕಳಿಸುವ ಮಾತೆಂದರೆ ಅಯ್ಯಂಗಾರ್ಯರಿಗೆ ದುಃಖವಾಗದೇ ಇದ್ದೀತೇ ? ಹೆತ್ತಕರುಳು ಚುರುಕ್ ಎಂದಿತು. ತಾಳಿ ಕಟ್ಟುವ ಕಾರ್ಯ ಮುಗಿದಮೇಲೆ ಮಾಲು ಕೈಬಿಟ್ಟತೆಂದು ಗಂಡಹೆಂಡರಿಬ್ಬರೂ ಮುಮ್ಮಲ ಮರುಗಿದರು. ಬಿಗುಮಾನದ ಬೀಗರು ಗೃಹಪ್ರವೇಶ ಶಾಸ್ತ್ರ ಮುಗಿಸಿದ ಕೂಡಲೇ ಹುಡುಗಿಯನ್ನು ಜೊತೆಗೇ ಕರೆದುಕೊಂಡು ಹೋಗುತ್ತೇವೆಂದ ಮೇಲಂತೂ ಅಯ್ಯಂಗಾರ್ಯರಿಗೆ ಬಹು ದುಃಖವಾಯಿತು. ಮದುವೆಯಾಗಿ

ನಿಷೇಕದ ಶಾಸ್ತ್ರ ಮುಂದಿನ ವರ್ಷ ನೆರವೇರಿಸಿದರೆ ಕೊಂಚ ದಿನ ಹುಡುಗಿ ಮನೇಲಿರುತ್ತೆ, ಎಂದು ಹಾಕಿದ ಏರ್ಪಾಡು ಹಾಳಾಗಿ ಹೋಗಿದ್ದು ಅಯ್ಯಂಗಾರ್ಯರಿಗೆ ಪರಮದುಃಖವನ್ನುಂಟುಮಾಡಿತು. ಕಣ್ಣೀರು ಮೂಗಿನ ಅಂಚಿನಿಂದ ಇಳಿದು, ನಶ್ಯಮಯ ಮೂಗಿನಿಂದ ಜಿನುಗುತ್ತಿದ್ದ ಪಾಕದೊಡನೆ ಬೆರೆತು ಕರವಸ್ತ್ರದ ಪಾಲಾಗುತ್ತಿದ್ದಿತಾದ್ದರಿಂದ ಕಾಣುತ್ತಿರಲಿಲ್ಲ. ಅವರ ಕುಟುಂಬಕ್ಕೂ ಮಗಳು ಇನ್ನೆರಡುದಿನ ಬಿಟ್ಟು ಗಂಡನ ಮನೆಗೆ ಹೋಗಲೆಂಬ ಚಪಲ. ಗಂಡಿನ ಮನೆಯವರಿಗೋ–ವರತೆರಿಗೆ, ವರೋಪಚಾರ, ವಾಚು ಎಲ್ಲಾ ಹೀರಿದ್ದರೂ ಹೆಣ್ಣನ್ನೂ ಅಂದೇ ಹಾರಿಸಿಕೊಂಡು ಊರು ಸೇರಬೇಕೆಂದು ಆಸೆ.

ಅಳಿಯನಿಗೇನೋ ಅರ್ಧಾಂಗಿ ಜೊತೆಗೆ ಅವಳ ಮನೇಲೇ ಇರಬೇಕೆಂಬ ಚಪಲ. ಸರಿ ಗುಸುಗುಸು ಪ್ರಾರಂಭವಾಯಿತು. ಗೃಹಪ್ರವೇಶ ಶಾಸ್ತ್ರ ಮುಗಿಸಿಬಿಡಿ, ಕೊಂಚದಿನ ಬಿಟ್ಟು ಮಗಳನ್ನು ಕಳಿಸುತ್ತೇವೆಂದು ಅಯ್ಯಂಗಾರ್ಯರ ಹಟ. ಶಾಸ್ತ್ರ ಮುಗಿದೊಡನೆಯೇ ಸೊಸೆ ಅತ್ತೆ ಮನೆ ಸೇರಬೇಕೆಂದು ಬೀಗರ ವಾದ. ಅತ್ತೆ ಮನೆ ಇನ್ನೂ ಹೊಸದು, ಹೇಗೆ ಹುಡುಗಿನ್ನ ನಿಷೇಕ ಶಾಸ್ತ್ರವಾಗದೆ ಗಂಡನ ಮನೆಗೆ ಕಳಿಸೋದೂ ಎಂಬುದು ಅಯ್ಯಂಗಾರ್ಯರ ತಾಪತ್ರಯ. ಸಾರಿ ಸಾರಿ ಹೇಳಿದರು "ಗೃಹಪ್ರವೇಶ ಪಣ್ಣೋಂಗೋ–ಗೃಹಪ್ರವೇಶ ಪಣ್ಣೊಳ್ರದಕಿ–ನಂದೊಣ್ಣು ಅಡ್ಡಿ ಇಲ್ಲೆ. ಪೆಣ್ಣು ಮಾತ್ರಂ ಇಪ್ಪವೇ ಎಪ್ಪಡಿ ಅಂಪಿರ್ಕದಿ?" ಎಂದು. ಆದರೆ ಬೀಗರು ತಾಳೀ ಕಟ್ಟಿದಮೇಲೆ ಪಾಲು ನಮ್ಮದೇ ಎಂದು ವಾದಿಸಿದರು. ಈಗ ಹುಡುಗೀನ ಕಳಿಸದಿದ್ದರೆ ಹುಡುಗಿ ನಿಮ್ಮನೇಲಿ ಇರ್ಲಿ ಎಂದು ಬೀಗರು ಬಿಗುಮಾನದಿಂದ ಹೇಳಿದರು. ಮಾತಿಗೆ ಮಾತು, ವಾದಕ್ಕೆ ಪ್ರತಿವಾದ—"ಶಾಸ್ತ್ರಂ ಪ್ರಕಾರ ಪಣ್ಣಿರ್ಕದೆಲ್ಲಾ ಪಣ್ಣಿಯೂ ಇದೆನ್ನ?" ಎಂದು ಅಯ್ಯಂಗಾರ್ಯರ ಕುಟುಂಬದ ಪ್ರಲಾಪ. ಕಡೆಗೆ ರೇಗಿ ಹೇಗೂ ನದಿ ದಾಟಿದ್ದರು ಇನ್ನು ಅಂಬಿಗನ ಮುಲಾಜೇನು? ಎಂದು ಸಿಕ್ಕಾಪಟ್ಟೆ ಮಾತು ಉಚಾಯಿಸಿದರು. ಸಾವಿರಾರು ರೂಪಾಯಿ ಕೊಟ್ಟಿರೋಣದರಿಂದ ಗಂಡಿನ ಮೇಲೆ ನಮ್ಮದೇ ಹಕ್ಕು ಎಂಬ ಅರ್ಥ ಕಾಣಿಸಿದರು. ಅಳಿಯನು ತಮ್ಮ ಮಗಳು ಕೊಂಡ ಗಂಡಾಳು ಎಂಬ ಮಾತೂ ಮಧ್ಯೆ

ತೂರಿ ಬಂತು. ಗಂಡಿನವರು ತಮಗೆ ಅಪಮಾನವಾಯಿತೆಂದು ಹಿಡಿದ ಹಟ ಬಿಡಲಿಲ್ಲ. ಸೊಸೆಯನ್ನು ಓಡಿಸಿಕೊಂಡು ಹೋಗುವಂತೆ ಅಳಿಯನಿಗೆ ಹೇಳಿಕೊಡುವುದಾಗಿ ಬೆದರಿಸಿದರು. ಕೊಟ್ಟ ವರ ತೆರಿಗೆ–ಬೆಳ್ಳಿ ಸಾಮಾನೆಲ್ಲಾ ಲಂಚ ಹೊಡೆದ ಹಣದ್ದು, ನೀವು ಕಷ್ಟಪಟ್ಟು ದುಡಿದದ್ದು ಅಷ್ಟರಲ್ಲೇ ಇದೆ ಎಂದು ಇವರೂ ಅವರನ್ನು ಹಂಗಿಸಿದರು. ಜಗಳ ಬಗೆಹರಿಯದೆ ರಂಗೇರು ತ್ತಿದ್ದುದನ್ನು ನೋಡಲಾರದೆ, ವಾಧ್ಯಾರು ಇಬ್ಬರಿಗೂ ಸಮಾಧಾನ ಹೇಳಿ, ಹೀಗೆ ಎಗರಾಡಿದರೆ ಯಾರಿಗೂ ಪ್ರಯೋಜನವಿಲ್ಲ ಬರೀ ಕಂಠಶೋಷಣೆ ಎಂದು ಒಂದು ಒಡಂಬಡಿಕೆಗೆ ಬಂದರು. ಸದ್ಯಕ್ಕೆ ಗೃಹ ಪ್ರವೇಶಶಾಸ್ತ್ರ ಮಟ್ಟಿಗೆ ನಡೆಯಬೇಕು, ಹದಿನಾರು ದಿನ ಬಿಟ್ಟು ಸಿಷೇಕ ಶಾಸ್ತ್ರ ಮುಗಿಸಿ ಹುಡುಗಿಯನ್ನು ಅತ್ತೆ ಮನೆಗೆ ಕಳಿಸಿಕೊಡಬೇಕೆಂದು ತೀರ್ಮಾನಿಸಿದರು. ಅಯ್ಯಂಗಾರ್ಯರಿಗೆ ಸಮಾಧಾನವಾಯಿತು. ಮದುವೆಗೆ ಮುಂಚೆ ಹುಡುಗ ಹುಡುಗಿ ವಾಕಿಂಗ್ ಹೋಗಕೂಡದು ಎಂದು ಅವರ ಮತ. ಅದಕ್ಕೆ ಹುಡುಗಿಯನ್ನು ಹದ್ದುಬಸ್ತಿನಲ್ಲಿ ಇಟ್ಟಿದ್ದರು. ವಾಧ್ಯಾರು, ವಾಲಗ ಆಗಲಿ ಗಂಡು–ಹೆಣ್ಣನ್ನ ಕರೆಯಿರಿ ಶಾಸ್ತ್ರ ಮುಗಿದುಬಿಡಲಿ ಎಂದು ಗಡಿಬಿಡಿ ಮಾಡಿದರು. ತೂಕಡಿಸುತ್ತಿದ್ದ ವಾಲಗದವರು "ಪೀ ಪೀ–ಡಬ್ ಡಬ್" ಎಂದು ಪ್ರಾರಂಭಿಸಿದರು. ಅಯ್ಯಂಗಾರ್ಯರು ಗಂಡು ಎಲ್ಲಾದರೂ ಲಪಟಾ ಯಿಸಾನು ಎಂದು ಉಗ್ರಾಣದಲ್ಲಿ ಅಡಗಿರಲು ಹೇಳಿದ ಪುತ್ರಿ ವಿಶಾಲಿಯನ್ನು ಹೊರಕ್ಕೆ ಬರುವಂತೆ ಕೂಗಿದರು. "ಅಮ್ಮಾ ವಿಶಾಲೂ ವಾಮ್ಮ" ಎಂದರು. ವಾಲಗ ಜೋರಾಯಿತು. "ವಿಶಾಲೂ" ಎಂದು ಅರಚಿ ದರು. ಪ್ರತ್ಯುತ್ತರವಿಲ್ಲ. ಸ್ವತಹ ಉಗ್ರಾಣಕ್ಕೆ ತಾವೇ ಹೋದರು ಎಲ್ಲಿ ನೋಡಿದರೂ ಹುಡುಗಿ ಪತ್ತೆಯಿಲ್ಲ. ಅಲ್ಲಿ ಬೀಗರ ಬಿಡಾರದಲ್ಲಿ ಅವಾಂ ತರ. ಅಲ್ಲಿಂದಲೂ "ನರಸಿಮ್ಮೂ..... ಎಂಗಿರ್ಕೆ" ಎಂಬ ಕೂಗು. ಅಳಿಯದೇವರು ಪತ್ತೆಯಿಲ್ಲ; ಮಗಳು ಮಂಗಮಾಯ.

ರಾತ್ರಿ ೯–೩೦ ರ ಪ್ರದರ್ಶನದಲ್ಲಿ ಥಿಯೇಟರಿನ ಬಾಕ್ಸಿನಲ್ಲಿ ವಿಶಾಲೂ ನರಸಿಮ್ಮೂ ಹೆಗಲಮೇಲೆ ಕೈ ಹಾಕಿಕೊಂಡು, ಕುಲು ಕುಲು ಹುಸಿ ನಗುತ್ತ, ಬೀಡಾ ಮೆಲ್ಲುತ್ತಾ "ಸುಭದ್ರಾ" ಸಿನಿಮಾ ನೋಡುತ್ತಾ ಕುಳಿತಿದ್ದರು.



# ದೇವರೇ ಗತಿ

ಮಹಾಮಹಾಪೋಧ್ಯಾಯ ಅಗ್ನಿಹೋತ್ರಿ ಯಾಜ್ಞವಲ್ಕ್ಯಚಾರ್ಯರ ಏಕ ಪುತ್ರಿ ಅಪರ್ಣಬಾಯಿಯ ಮದುವೆ ನೆನಸಿಕೊಂಡರೆ, ಅದರಲ್ಲೂ ಆ ಬಂಡಿ ಬಾಗಿನ ಹೊದಿಸಿದ್ದು ನೋಡಿದರೆ ಆಚಾರ್ಯರ ಅಳಿಯ ಎಂತಹ ಪುಣ್ಯವಂತ ಎನಿಸುತ್ತದೆ. ಮಹಾಭಕ್ತರು ಮೇಲೆ ಮಠಾಧಿಕಾರಿಗಳು, ತಮ್ಮ ಮಗಳು ಪರಮಾತ್ಮನ ಆರಾಧನೆಯಿಂದ ಸಂಸಾರದಲ್ಲಿ ಉನ್ನತ ಸುಖವನ್ನು ಹೊಂದಿ ಇಹಪರಗಳಲ್ಲಿ ಆನಂದದಿಂದಿರಲೆಂದು ೧೦೧ ಚೊಕ್ಕ ಬೆಳ್ಳಿಯ ನಾನಾತರಹ ದೇವರುಗಳ ಪ್ರತಿಮೆಗಳನ್ನು ಮಗಳಿಗೆ ಕೊಟ್ಟು ಧಾರೆ ಎರೆದಿದ್ದರು. ಕೊಡುವುದರಲ್ಲಿ ಯಾಜ್ಞವಲ್ಕ್ಯಚಾರ್ಯರು ಹಿಂದು ಮುಂದು ನೋಡುತ್ತಿರಲಿಲ್ಲ. ಮಗಳ ಮದುವೆಗೆ ಹೋದವರಿಗೆಲ್ಲಾ ಪಂಚೆ ಕಣಗಳು ನಾಲ್ಕಾಣೆ ದಕ್ಷಿಣೆಕೊಟ್ಟವರು, ಇನ್ನು ಅಳಿಯ ಮಕ್ಕಳಿಗೆ ಇನ್ನೆಷ್ಟು ಕೊಟ್ಟಿದ್ದಾರು.... ಊಹಿಸಲಸಾಧ್ಯ—ಈ ಯುದ್ಧ ಕಾಲದಲ್ಲಿ ನನಗೊಬ್ಬ ಅಂಥಾ ಮಾವ ಸಿಕ್ಕರೆ? ............

ಅಳಿಯದೇವರು ವೇದವಿದ್ಯಾಪಾರಂಗತ ತರ್ಕಶಾಸ್ತ್ರ ಶಿರೋಮಣಿ ವೆಂಕಣ್ಣಾಚಾರ್ಯರ ಏಕಪುತ್ರ–ಅನುಪಮ ಗುಣಾಚಾರ್ಯರು–ಹೆಸರಿಗೆ ತಕ್ಕ ಗುಣ. ಪಂಡಿತ ಪುತ್ರ. ಯಾಜ್ಞವಲ್ಕ್ಯಾಚಾರ್ಯರು ವೆಂಕಣ್ಣಾಚಾರ್ಯರ ವಿದ್ಯೆಗೆ ಮೆಚ್ಚಿ ಈ ಸಂಬಂಧ ಬೆಳೆಸಿದ್ದರು. ಈ ಲಗ್ನದ ಸುದ್ದಿ ಹಿಮಾಚಲ ದಿಂದ ಕನ್ಯಾಕುಮಾರಿವರೆಗೆ ಹರಡಿತ್ತು, ಹರಡತಕ್ಕಂಥಾದ್ದೆ.

* * *

ಕೆಲಕಾಲದ ಮೇಲೆ ಅರ್ಪಣ ಗಂಡನ ಮನೆ ಸೇರಿದಳು....ಯಾಜ್ಞ ವಲ್ಕ್ಯಾಚಾರ್ಯರು ವೆಂಕಣ್ಣಾಚಾರ್ಯರು ಮುಪ್ಪಾಗಿ ಪರಂಧಾಮಕ್ಕೈದಿ ದರು....ಸಕಲ ಬಳಗವೂ ಅವರೊಡನೆಯೇ ಈ ದಂಪತಿಗಳನ್ನು ಮರೆತರು.

ಬೆಟ್ಟದಷ್ಟು ಆಸ್ತಿ ಇತ್ತು. ಈ ಪಂಡಿತ ಪುತ್ರ ತಂದೆ ಸತ್ತಾಗ ವೈಭವದಿಂದ ದಾನಧರ್ಮ ನಡೆಸಿದ.....ಕುಡಿಕೆ ಹಣ ಕೂತು ತಿಂದರೆ ಆದೀತೆ? ತಂದೆ, ಮಾವ ಸತ್ತು ೫ ವರ್ಷದಲ್ಲಿ ಎಲ್ಲಾ ಕರಗಿ ಹೋಯಿತು. ಅಪರ್ಣಾಬಾಯಿಂದೇ ಬಹಳ ಆಸ್ತಿ ಬಂದು ಇವರ ಮನೆಗೆ ಸೇರಿತ್ತು. ಈ ಅನುಪಮಗುಣಾಚಾರ್ಯರ ಆಡಂಬರದ ದುಂದಿಗೆ ಇಡೀ ಮಠದ ಆಸ್ತಿ ಯಾದರೂ ನಾಲದು. ಮೇಲಾಗಿ ಪುಣ್ಯಾತ್ಮನಿಗೆ ಇವರ ತಂದೆ ಖರ್ಚು ಮಾಡುವುದನ್ನು ಕಲಿಸಿದ್ದರೇ ವಿನಹ ಸಂಪಾದಿಸುವುದನ್ನು ಹೇಳಿಕೊಡಲಿಲ್ಲ. ಕೊಂಚ ಮುಂದರಿದ ಹುಡುಗ ವೈದೀಕವೃತ್ತಿ ಮಾಡಲು ಮಂತ್ರ ಮರೆ ತಿದ್ದ, ಮೇಲೆ ಒಂದು ತರಹ ದೊಡ್ಡಸ್ತಿಕೆಗೆ ಒಳಬಿದ್ದು ಮುಂದರಿದು ಹೋಗುತ್ತಿರಲಿಲ್ಲ.

ದಿನದಿನಕ್ಕೆ ಸಂಸಾರ ಸಾಗಿಸುವುದೇ ದುಸ್ಸಾಧ್ಯವಾಯಿತು. ಪಾಪ ಅಪರ್ಣಾಬಾಯಿ ಭೋಳೆ ಮನುಷ್ಯಳು. ಮೊದಲಿಂದ ಸುಖದಲ್ಲಿ ಬೆಳೆ ದಾಕೆ. ಗಂಡ ಹೇಗೆ ಸಂಪಾದಿಸುತ್ತಾನೆಂಬುದನ್ನೇ ಅರಿಯಳು. ಈ ಗುಣಾಚಾರ್ಯರು ತಲೆ ಮೇಲೆ ಕೈ ಹೊತ್ತುಕೊಂಡು ಕುಳಿತರು. ತಮ್ಮ ಮದುವೆ ವೈಭವ ನೆನಸಿಕೊಂಡು ಕಣ್ಣೀರಿಟ್ಟರು. ದೇವರೆ! ಎಂದರು ಘಟ್ಟನೆ ಮಾವನವರು ಹೊದಿಸಿದ ೧೦೧ ದೇವರುಗಳ ನೆನಪು ಬಂತು........ ದೇವರು ಮಾರ್ಗ ತೋರಿಸಿದ.

* * *

" ಅಲ್ಲ ಮತ್ತೆ ನಾಳೆಗೇನು ಮಾಡ್ತೀರೆಂದ್ರೆ........ ಇವತ್ತೇನೋ ಹೆಂಗೋ ಆಗ್ತದೆ."

" ಛೆ! ನಾಳಿನ ಯೋಚನೆಯಾಕೆ ಮಾಡ್ತಿ ಅಪರ್ಣಾ.... ನಾಳೆಗೊಬ್ಬ ದೇವರಿದ್ದಾನೆ."

" ಹಿಂಗ ದೇವರ ಮ್ಯಾಲೆ ಭಾರಹಾಕಿದರೆ ಹ್ಯಾಂಗ? ಮನ್ಯಾಗ ನೋಡಿದರೆ ಕಾಳು ಅಕ್ಕಿ ಕೂಡ ಇಲ್ಲ...."

" ಇನ್ನು ನನಗೆ ಸಿಟ್ಟು ಬರ್ತದೆ ನೋಡು: ನಾಳೆಗೊಬ್ಬ ದೇವರಿದ್ದಾನೆ ಅಂತ ಬಡಕೋತಿದ್ದೀನಿ. ಇನ್ನೂ ನೀನು ವಟವಟ ಅಂಬೋದು ಬಿಡವಲ್ಯಲ್ಲ"

" ಹಿಂಗ್ಯಾಕ ಸಿಟ್ಟು ಮಾಡ್ತೀರಿ.... ನನಗ್ಯಾಕೊ ಈ ಸಂಸಾರ ಬ್ಯಾಸರಿಕಿ ಬಂದದ....ಕೆರೀನೋ........ಭಾವೀನೊ...." "........ಇಲ್ಲ ನೇಣೋ ಹಾಕ್ಯೊಂಡು ಸಾಯ್ತೀಯೇನು?....ಈಗ ಯಾಕ ಸಾಯ್ತಿ ದೇವರೆಲ್ಲಾ ಮುಗೀಲಿ....ಆ ಮ್ಯಾಲೆ ಸಾಯೋದಿದ್ದೆ ಅದ"

" ....ನಿಮಗನಕ ಮೂರು ಹೊತ್ತು ಇದೇ ವೇದಾಂತನೇ ಆಗಿ ಹೋಗೇದ....ಅಪ್ಪ ಇದ್ದ ಕಾಲದಾಗ...."

" ಯಾಕ ನೆನಸಿಕೊಂಡು ಅಳ್ತಿ....ಪ್ಯಾಟಿಕಡಿ ಹೋಗಿ ಬರ್ತೀನಿ.... ಹುಶಾರು...."

❦ ❦ ❦

" ....ನಾಳೆ ನವರಾತ್ರಿ ಶುರು ಆಗ್ತದ....ದೇವರೆಲ್ಲಾ ತೆಗೆದು ತೊಳೆದು ಪೂಜಗಿಡಬೇಕಾಗೆದ...."

" ....ಅಲ್ಲೇ ಪೂಜಿ ಮಾಡ್ಲೇಬೇಕೇನು...."

" ಕೀಲಿ ಕೈ ಕೊಡ್ರಿ....ಪೆಟ್ಟಿಗೆ ತೆಗೆದು ಪೂಜಿಗೆ ಅಣಿ ಮಾಡ್ತೀನಿ.... ಹಬ್ಬಕ್ಕೆ ಸಾಮಾನ ಸರಂಜಾಮು ತೊಗೊಂಡು ಬರ್ರಿ...."

" ಸಾಮಾನ ತರಲಿಕ್ಕೆ ಹ್ಯಾಂಗಾರ ದೇವರೇಗತಿ"

" ಹ್ಯಾಂಗೋ ದೇವರು ಇದುವರೆಗೂ ನಡಿಸ್ಯಾನೋ ಇಲ್ಲೋ ಹಂಗೆ ಮುಂದೂ ನಡೆಸ್ತಾ...."

" ಮುಂದೇನು ನಡೆಸ್ತಾನೆ. ಇನ್ನೆರಡೇ ದೇವರುಳಿದಾವ...."

"ಇದೇನು ಹಿಂಗಂತಿರೀ....ಎರಡೇನು ಮೂರೇನು ಎಲ್ಲಾ ದೇವರೂ ಒಂದೇ....ಹನುಮಂತ ದೇವರ ಗುಡಿಗೆ ಕರಿಗಡಬು ನೇವೇದ್ಯ ಮಾಡಿಸರಿ ....ಎಲ್ಲಾ ಸರಿಹೋಗ್ತ್ವದ...."

"ಕರಿಗಡಬು ನೇವಿದ್ಯಾಮಾಡಿಸಲಿಕ್ಕೆ ದೇವರು ಬೇಕಲ್ಲೇ."

"ಇದೇನು ಮಾತು ಮಾತಿಗೆ ದೇವರೂಂತಿರಲ್ರಿ. ದೇವರ ಹುಚ್ಚು ಹಿಡಿತದ ನಿಮಗೆ."

"ದೇವರಿಲ್ಲದಿದ್ದರೆ ಇಷ್ಟು ದಿನ ನಾವಿರ್ತಿದ್ದೆವೇನೆ?....ಇನ್ನೆರಡಾದ ಮೇಲೆ ಗತಿ ಏನೂಂತಿನಿ?"

"ನಿಮ್ಮ ಹುಚ್ಚು ಹುಚ್ಚು ಮಾತು ನಾಕು....ಕೇಲಿ ಕೈಕೊಡ್ರಿ. ಅಲ್ಲಾಂದ್ರೆ....ಪೆಟ್ಟಿಗಿವಳಿಗೆ ನಮ್ಮಪ್ಪ ಮದುವಿವಳಗೆ ಕೊಟ್ಟ ದೇವರುಗಳೆಲ್ಲ?"

"ಆ ದೇವರೇ ನಮ್ಮನ್ನ ಇಷ್ಟು ದಿನದ ತನಕ ಕಾಪಾಡಿದ್ದು...."

"ಅಯ್ಯೋ ಹಣೇಬಾರೆ ...ಏನಾದವರೀ."

"ಆಗೋದೇನು ಹೊಲ, ಮನಿ, ಗದ್ದಿ, ತೋಟ ಹೋದಮ್ಯಾಲೆ ಬೆಳ್ಳಿ ತಂಬಿಗಿ ಲೋಟ,....ಸರ....ಅಡ್ಡಿಕಿ....ಹೋದವು....ಇನ್ನು ಮುಂದೆ ನನಗೆ ದಾರಿ ತೋರ್ಸಿದ್ದು ಈ ಬೆಳ್ಳಿ ದೇವರೆ!...."

"ಹಣೇಭಾರ....ಭಂಡಿ, ಬೆಳ್ಳಿ ವಸ್ತ ಹಾಳುಮಾಡಿದಿರಿ ...ಪೂಜಿಗೇಂತ ಕೊಟ್ಟ ದೇವರನ್ನೆಲ್ಲಾ ಮಾರಲಿಕ್ಕೆ ನಿಮಗೇನು ಬಂತು ಧಾಡಿ ....ನಾನು ಕೆರೀನೋ ಭಾವಿನೋ ಹಾರಿ ಪ್ರಾಣ ಬಿಡ್ತೀನಷ್ಟೆ...."

"ಈಗ ಯ್ಯಾಕ. ಇನ್ನೆರಡು ದೇವರವಲ್ಲ ಅವು ಮುಗಿದಮ್ಯಾಲೆ ಸಾಯೋಣಂತೆ. ನಾನೂ ಬರ್ತೀನಿ."



# ಸ್ಫೂರ್ತಿ ಬಂದಾಗ...!



ಪ್ರಪಂಚದಲ್ಲಿ ಕವಿಗಳು ಕಡಿಮೆ....ಸದ್ಯ ಒಂದಕ್ಕೆ ಅನುಕೂಲ; ಎಲ್ಲರೂ ಕವಿಗಳೇ ಆಗಿಹೋದರೆ ಬಹಳ ಕಷ್ಟವಾಗುತ್ತಿತ್ತು. ಕಷ್ಟವೇಕೆ ಇಡೀ ಜಗತ್ತೇ ಅಲ್ಲೋಲಕಲ್ಲೋಲವಾಗಿ ಎಲ್ಲಿ ನೋಡಿದರೂ ಪದ್ಯ, ಎಲ್ಲಿ ನೋಡಿದರೂ ಕಾವ್ಯವಾಗಿ....ಎಲ್ಲರೂ ಒಂದೊಂದು ಕಾವ್ಯ ಸಂಗ್ರಹ ಹೊರಡಿಸಿ ನಾ ಹೆಚ್ಚು....ನನ್ನ ಕವನ ಮೇಲು ಎಂದು ಅವರವರೇ ಕೂಗಿ ಕೊಳ್ಳುತ್ತ ಸಮರ ನಡೆಸುತ್ತಾ ಈಗಿನ ಘೋರ ಸಮರಕ್ಕಿಂತ ದೊಡ್ಡ ಕದನವಾಗುತ್ತಿದ್ದಿತು....ಹುಚ್ಚರ ಆಸ್ಪತ್ರೆಗಳು ಹೆಚ್ಚುತ್ತಿದ್ದವು. ದೇವರ ದಯದಿಂದ ಜಗತ್ತಿನಲ್ಲಿ ಕವಿಗಳ ಸಂಖ್ಯೆ ಒಂದು ಮಿತದಲ್ಲಿದೆ. ಕವನ ರಾಣಿ—ಸರಸ್ವತಿ ಎಲ್ಲರಿಗೂ ಒಲಿಯುವುದಿಲ್ಲ. ಪೂರ್ವಜನ್ಮದ ಸುಕೃತ ದಿಂದಲೋ, ಇಲ್ಲ ಸರಸ್ವತಿ ಗಣಪತಿಯರ ಕೃಪಾಕಟಾಕ್ಷದಿಂದಲೋ ಅಲ್ಲಲ್ಲಿ ಒಬ್ಬೊಬ್ಬ ಕವಿಗಳು ಹುಟ್ಟಿರುತ್ತಾರೆ. ಅಂತಹ ಕವಿಗಳನ್ನು ಕಂಡರೆ ಜನಗಳಿಗೆ ಗೌರವ, ಆದರ....ಒಂದು ತರಹ ಭಕ್ತಿ. ಅವರ ಸಾಹಿತ್ಯ ಸೇವೆ ಅಪಾರವಾದುದು....ಕವಿಗಳು ನಾಡಿನ ಚಿನ್ನದ ಗಣಿಗಳು.

ಎಲ್ಲಿ ಕೂತರಲ್ಲಿ ಯಾವಾಗಲೆಂದರಾವಾಗ ಕವನ ಬರೆಯಲು ಸಾಧ್ಯ ವಿಲ್ಲ....ಎಂತಹ ವರ ಕವಿಯಾದರೂ ಸ್ಫೂರ್ತಿ ಬರಬೇಕು ಆಗ ಬರೆಯ ಬೇಕು. ಸ್ಫೂರ್ತಿ ಬಂದಾಗ ತನ್ನಷ್ಟಕ್ಕೆ ತಾನೇ ಕವಿತೆ ಉಕ್ಕಿ ಕಾಗದದ ಮೇಲೆ ಹರಿಯುತ್ತದೆ. ನನಗೂ ಆಗಿಂದಾಗ್ಯೆ ಸ್ಫೂರ್ತಿ ಬರುತ್ತದೆ. ನಾನೂ–ನಾನು ಗೊತ್ತಲ್ಲ ನಿಮಗೆ–ನಾಡಿನ ಒಂದು ಚಿನ್ನದ ಗಣಿ ಅಂತ ತೋರುತ್ತದೆ. ತೋರುತ್ತೆಯೇನು ; ಗಣಿನೇಂತ ಅನ್ನಿ, ಹಲಕೆಲವು ಕವಿತೆಗಳನ್ನು ಬರೆದಿದ್ದೇನೆ. ಒಂದು ಸಲ ಹಾಗೇ ಮನೆ ವರಾಂಡದಲ್ಲಿ ಕುಳಿ ತಿದ್ದೆ....ಮನೆ ಮುಂದೆ ಹರಕು ಚಿಂದಿ ಉಟ್ಟ ಭಿಕ್ಷುಕಳು ಮಡಕೆ ಹಿಡಿದು “ಅಮ್ಮಾ ಭಿಕ್ಷ” ಎಂದು ಕೂಗುತ್ತಿದ್ದಳು. ಒಂದು ನಾಯಿ ಅವಳ ಮಡಕೆ ನೋಡಿ ಬೌ ಎಂದು ಬೊಗುಳಿತು. ಅವಳು ಹೆದರಿ ಮಡಕೆ ಎಸೆದುಬಿಟ್ಟಳು.....ಅನ್ನ ಮಣ್ಣು ಪಾಲು....ಅಯ್ಯೋ ಎಂತಹ ದೃಶ್ಯ. ನನ್ನ ಕವಿ ಹೃದಯ ಅರಳಿ........ಬಂತು.....ಸ್ಫೂರ್ತಿಬಂದೇಬಿಟ್ಟಿತು........ ಎದ್ದು “ಭಗ್ನ ಹೃದಯ” ಎಂಬ ಕವನ ಬರೆಯಲು ಹೊರಟೆ........ ಜೇಬಿ ನಲ್ಲಿದ್ದ ಪೆನ್ನಿನಿಂದ ಕಾಗದದ ಮೇಲೆ ಬರೆಯತೊಡಗಿದೆ........ಪೆನ್ನನ್ನು ಕೊಡವಿ ಬರೆದೆ....ಥೂ, ಎಂದು ಒತ್ತಿ ಬರೆದೆ ಆದರೂ ಬರೆಯಲಿಲ್ಲ. ಅದರಲ್ಲಿ ಮಸಿ ಇದ್ದರೆ ತಾನೆ? ಅಯ್ಯೋ ಒಳ್ಳೆ ಸ್ಫೂರ್ತಿ ಬಂದಾಗಲೇ ಹೀಗಾಗಬೇಕೇ ? ಬೇಗ ಮಸಿ ಹಾಕೋಣವೆಂದು ರೂಮಿನ ಬಳಿ ಬಂದು ನೋಡಿದರೆ ನನ್ನ ಸೋದರ ಮಾವ ವೆಂಕಪ್ಪ ಬೀಗ ಹಾಕಿಕೊಂಡು ವಾಕಿಂಗ್ ಹೋಗಿದ್ದ....ಹಾಳು ಸ್ಫೂರ್ತಿ ಇಂತಹ ಸಮಯದಲ್ಲೇ ಬರ ಬೇಕೆ?....ಅಯ್ಯೋ ನಾಡು ಎಂತಹ ಸ್ಫೂರ್ತಿದಾಯಕ ಭಾವನಾಮಯ ಕವನ ಕಳೆದುಕೊಂಡಿತು....ನಾಡಿನ ದುರ್ಭಾಗ್ಯಕ್ಕೆ ಮರುಗದೆ ಇನ್ನೇನು ಮಾಡಲಿ ?

ನಾನು ಬರೆದ ಕವನಗಳು ಯಾವುವೂ ಇನ್ನೂ ಮುದ್ರಾರಾಕ್ಷಸನಿಗೆ ಬಲಿಯಾಗಿಲ್ಲ. ಅಷ್ಟಾಗಿ ನನಗೆ ಮುದ್ರಣದ ಮೋಹ ಹೆಚ್ಚಾಗಿಲ್ಲ. ಸ್ಫೂರ್ತಿ ಬಂದಾಗ ಗೀಚಿಡುತ್ತೇನೆ ಓದಿದವರು ‘ಮಹಾ ಕಾವ್ಯ’ ‘ಕವಿ ಸಾಮ್ರಾಟನ ಲೇಖನಿಯ ಕಿಡಿ’ ಎನ್ನುತ್ತಾರೆ. ಬರೆದು ಬರೆದು ಮೇಜಿನ ಮೇಲೆ ಎಸೆದಿರುತ್ತೇನೆ. ನನ್ನ ಹೆಂಡತಿ ಓದುತ್ತಾಳೆ. ನಮ್ಮ ವೆಂಕಪ್ಪ

ಓದುತ್ತಾನೆ. ಅವರೇ ಹೇಳಿದ್ದು ಮೇಲಿನ ಮಾತುಗಳನ್ನ. ನನ್ನಾಕೆ ಶಾರದ ' ಎಷ್ಟು ರಸವತ್ತಾಗಿದೇಂದ್ರೆ ಪದ್ಯ....ಸುಮ್ಮನೆ ಬರೆದು ಬರೆದು ಮನೆಯಲ್ಲಿಟ್ಟುಕೊಂಡರೇನು ಪ್ರಯೋಜನ ಪ್ರಕಟಣೆಗೆ ಕಳುಹಿಸಬಾರದೆ" ಎಂದಳು. ನಾನು " ಅವರೇ ಬರ್‍ತಾರೆ, ಪತ್ರಿಕೆ ಉದ್ಧಾರವಾಗಬೇಕಾದರೆ ದಮ್ಮಯ್ಯ ಎಂದು ಕಾಲಿಗೆ ಬಿದ್ದು ತೆಗೆದುಕೊಂಡು ಹೋಗುತ್ತಾರೆ" ಎಂದು ಹೇಳುತ್ತಿದ್ದೆ. ಒಂದು ದಿನ ರಾತ್ರಿ ೧೨ ಗಂಟೆಯಾಗಿತ್ತು ಕೊಂಚ ತಲೆನೋವು ಜ್ವರ ಬಂದಿತ್ತು. ಶಾರದ, ತಲೆಗೆ ಅಮೃತಾಂಜನ ತಿಕ್ಕುತ್ತ ಪಕ್ಕದಲ್ಲಿ ಕುಳಿತಿದ್ದಳು. ....ಇದ್ದಕ್ಕಿದ್ದ ಹಾಗೆ ಸ್ಫೂರ್ತಿ ಬಂದು ಬಿಡು—" ಲೇ ಶಾರದ, ಕೊಡು ಲೇಖನಿ ಕೊಡು, ಕಾಗದ ಕೊಡು....... ಬಂದೇ ಬಿಡ್ತು ಸ್ಫೂರ್ತಿ" ಎಂದು ಥಟಕ್ಕನೆ ಎದ್ದು ಕುಳಿತೆ. " ಜ್ವರದಲ್ಲಿ ಎಂಥ ಸ್ಫೂರ್ತಿ.......ಮಲಗಿಕೊಳ್ಳಿ, ಆಯಾಸ ಮಾಡಿಕೊಳ್ಳಬೇಡಿ." " ಥೂ ನಿನ್ನ ಮನೆ........ಬೇಗ ಕೊಡೆ........ಸ್ಫೂರ್ತಿ" ಇನ್ನೂ ಹೇಳಿ ಪ್ರಯೋಜನವಿಲ್ಲವೆಂದು........ಲೇಖನಿ ಕಾಗದ ತಂದುಕೊಟ್ಟು ಗಾಬರಿ ಯಾಗಿ ನಿಂತಳು.

ಬರೆದೆ, ಭಾವನಾಮಯ ಚಿತ್ರ ರಚಿಸಿದೆ.

ಏಳು ಎನ್ನಯ ರಾಣಿ
ಏಳು ಕವಿ ರಾಣಿ
ಏಳು ತಲೆ ಶೂಲೆಯ ರಾಣಿ
ಏಳು ನೀ ಜಾಣಿ

" ಅಹಹ........ಎಷ್ಟು ಚೆನ್ನಾಗಿದೇಂದ್ರೆ........ವರಕವಿ"

" ........ಇನ್ನೂ ಇದೆ ಬರಿಯೋದು........"

" ನಾಳೆ ಬರೀರಂತೆ ಈಗ ಬರೆದಿದ್ದನ್ನು ಪ್ರಕಟಣೆ ಕಳಿಸೀರಂತೆ........ ಸುಮ್ಮನೆ ಮಲಗಿ ಹೊತ್ತಾಯಿತು." ಎಂದು ಶಾರದ ಬಿರುಸಾಗಿ ಮಾತ ನಾಡಿದಳು. ಹೊದ್ದು ಉರುಳಿದೆ. ತಲೆ ವಿಪರೀತ ನೋಯುತ್ತಿದ್ದಿತು.

ಮರುದಿನ ಆ ನನ್ನ ಕಾವ್ಯವನ್ನು ಪತ್ರಿಕೆಗೆ ಕಳುಹಿಸಿದೆ........ಕಾದೆ; ಇಂದು ನಾಳೆ ಬರಬಹುದೆಂದು ಬರಲೇ ಇಲ್ಲ. ಕಡೆಗೆ ಸ್ಟಾಂಪಿಟ್ಟು ಸಂಪಾ ದಕರಿಗೆ ಕಾಗದ ಬರೆದೆ........ಕಡೆಗೆ ಬಂತು........ಉತ್ತರ, ಕಾಗದಕ್ಕೆ

‘ ಮಹಾಶಯರೆ! ನಾವು ಇನ್ನೂ ಬಹಳ ದಿನ ಪತ್ರಿಕೆ ನಡೆಸಬೇಕೆಂದಿದ್ದೇವೆ ........ದಯಮಾಡಿ ನಿಮ್ಮ ಕವನಗಳನ್ನು ಕಳಿಸುವ ತೊಂದರೆ ತೆಗೆದುಕೊಳ್ಳ ಬೇಡಿ ಇತಿ ಅನಂತ ನಮಸ್ಕಾರಗಳು, ಎಂದು ಬರೆದಿದ್ದರು. ಓದಿದ ಕೂಡಲೇ ಮೈ ಬೆವರಿತು, ತಲೆ ತಿರುಗಿತು....ಆಗಲೂ ಬಂತು ಸ್ಫೂರ್ತಿ.... ‘ಶಾರದಾ’ ಎಂದು ಕೂಗಿದೆ. ಗೊತ್ತು ಅವಳಿಗೆ ಸ್ಫೂರ್ತಿಯ ಕೂಗು! ಲೇಖನಿ ಕಾಗದ ತೆಗೆದುಕೊಂಡೇ ಬಂದಳು. ಬರೆದೆ ಒಂದು ಕವಿತೇನ:—

“ ಅಯ್ಯೋ ಎಷ್ಟು ಚೆನ್ನಾಗಿದೇಂಪ್ರೆ........ಇದನ್ನ ಪತ್ರಿಕೆಗೆ ಕಳಿಸಿ” ಎಂದಳು ಎನ್ನ ಮನದನ್ನೆ; ಮತ್ತೆ ಬಂತು ಸ್ಫೂರ್ತಿ........ಬರಬಾರ ದಾಗಿತ್ತು....ಯತ್ನವಿಲ್ಲ ಬಂದೇ ಬಿಡ್ತು........ಅದರ ಜೊತೆಗೆ ವೆಂಕಪ್ಪನೂ ಬಂದ........

“ ಎಷ್ಟು ಬೇಗ ಬೇಗ ಬರೆದರೂ ಅಕ್ಷರ ಎಷ್ಟು ಗುಂಡಾಗಿದೆ........” ಎಂದ ವೆಂಕಪ್ಪ.

“ ನೋಡು ವೆಂಕಪ್ಪ ಎಷ್ಟು ಚೆನ್ನಾಗಿ ಬರೀತಾರೆ....ಪ್ರಕಟಣೆಗೆ ಕಳಿಸಿರೆಂದರೆ ಕಳಿಸೋದಿಲ್ಲ.”

‘ ಲೇ! ಶಾರದಾ! ........ನಾಕು........ಶಾರದಾ!’ ನನ್ನ ಸ್ಫೂರ್ತಿ ಎಲ್ಲೆ ಮೀರಿತು. “ ಶಾರದಾ....” ಎಂದೆ “ ಲೇಖನಿ ಕಾಗದ ಎದುರಿಗೇ ಇದೆ” ಎಂದಳು. ಸ್ಫೂರ್ತಿ ಮಿತಿಮೀರಿತು. ತಲೆ ತಿರುಗಿದಂದಾಯಿತು. ‘........ಹಾ....ಶಾರದಾ—ಸರಸ್ವತಿ ಕವಿರಾಣಿ’ ಎಂದೆ....ಎದ್ದು ನಿಂತೆ. ಮತ್ತೆ ಕುಳಿತೆ....‘ವೆಂಕಪ್ಪಾ’ ಎಂದೆ....ಅತ್ತಿಂದ ಇತ್ತ ತಿರುಗಿದೆ....ಮತ್ತೆ ಕುಳಿತೆ.

“ ಶಾರದಮ್ಮ! ಕವಿಗಳಿಗೆ ಸ್ಫೂರ್ತಿ ಬಹಳ ಬಂದಿದೆ. ಕೊಂಚ ಕಾಫಿ ಮಾಡಿಕೊಡು ಸ್ವಲ್ಪ ಸ್ಥಿಮಿತಕ್ಕೆ ಬರುತ್ತಾರೆ’ ಎಂದ ವೆಂಕಪ್ಪ.

“ ಕಾಫಿ ಬೇಡ....ತಣ್ಣಗೆ ಕಲ್ಸಕ್ಕರೆ ಪಾನಕ ಮೇಲಲ್ಲವೇ ” ‘ ಯಾವುದೋ ಒಂದು ಬೇಗ ಕೊಡೆ....ನಿನ್ನ ಮನೆ ಹಾಳಾಗ. ನನ್ನ ಕವಿತೆ ಹಾಳಾಗ........ವೆಂಕಪ್ಪನ ತಲೆ ಒಡೆಯ....ಏನೇನು ಬೇಕೋ ಎಲ್ಲಾ ಆಗಾ........ಬೇಗ....ಪಾನಕ’ ಎಂದೆ.

" ಒಂದೊಂದು ಮಾತೂ ಕವನದ ತುಂಡು........ವರಕವಿ ! ಮೇಲೆ ಸ್ಫೂರ್ತಿ....ಕೇಳಬೇಕೆ ಕವನ ಬಾಣ ! ಒಂದರ ಮೇಲೊಂದು "

" ಹಾಗೇ ಅದು ಸ್ಫೂರ್ತಿ ಬಂದಾಗ....ಅವರಿಗೆ ಆಗಿಂದಾಗ ಬರುತ್ತಲೇ ಇರುತ್ತೆ........ಇವರ ಕೈಹಿಡಿದ ನಾನೇ ಭಾಗ್ಯವತಿ "

" ........ಸಂಕಟ....ವೆಂಕಪ್ಪ ನಿನಗೂ ಬಂತೇ ಸ್ಫೂರ್ತಿ " ಎಂದು ಫಳೀರ್ ಎಂದು ಬಾರಿಸಿದೆ ವೆಂಕಪ್ಪನ ಕೆನ್ನೆಗೆ, ಶಾರದಾ ಗಾಬರಿಯಾಗಿ ........ಒಳಕ್ಕೆ ಓಡಿದಳು. ಇಲ್ಲದಿದ್ದರೆ ಅವಳಿಗೂ ಒಂದು ಬಿಗಿಯುತಿದ್ದೆ........ಬಂದಿತ್ತು ಸ್ಫೂರ್ತಿ ವೆಂಕಪ್ಪನ ಕೆನ್ನೆ ಮೇಲೆ. ಮರುದಿನ ಡೆಂಟಲ್ ಸರ್ಜನ್ ಹೇಳಿದರಂತೆ. ವೆಂಕಪ್ಪನಿಗೆ........ಒಂದು ಹಲ್ಲು ಕಿತ್ತಿಸಲೇ ಬೇಕಂತೆ....ಸ್ಫೂರ್ತಿ ಬಂದಿತ್ತು.

ಸ್ಫೂರ್ತಿ ಬಂದಿತ್ತಾ ! ತಂಗಿ ಸ್ಫೂರ್ತಿ ಬಂದಿತ್ತಾ !
ಮಾವ ವೆಂಕಪ್ಪನ ಕಪಾಳ ಬಾಯಿಸಿ
ಸ್ಫೂರ್ತಿ ಬಂದಿತ್ತಾ ತಂಗಿ........



# ಒಂಟಿಗಳು



ನಮ್ಮದು ದೊಡ್ಡ ಮನೆ. ಕೊಂಚ ಜನವೂ ಇದ್ದೇವೆ. ಆದರೆ ಈ ಮದುವೆ ಮನೆಯವರು ನಮ್ಮ ಪಾಡು ಹೀಗೆ ಮಾಡಬೇಕೆ? ನಶ್ಯ ಮೂಗಿನ ಎತ್ತರನೆಯ ಆ ಮನುಷ್ಯನ ವಿನಯಕ್ಕೆ ನಾನು ಮರುಳಾಗಲಿಲ್ಲ. ಆದರೆ ಆ ವ್ಯಕ್ತಿಯ ಕುಟುಂಬಕ್ಕೂ ನನ್ನ ಕುಟುಂಬಕ್ಕೂ ಗಳಸ್ಯ ಕಂಠಸ್ಯವೆಂದು ಹೇಳಿದ್ದರ ಮೇಲೆ ಏನೋ ಎರಡು ದಿನಕ್ಕೆಂದು ಮನೆ ಮುಂದಿನ ರೂಮು ವರಾಂಡಾ ಬಿಟ್ಟು ಕೊಟ್ಟಿದ್ದಕ್ಕೆ ಆ ವ್ಯಕ್ತಿ ಒಂಟಿಯಾಗಿ ಬಿಡಬೇಕೆ? ಪಕ್ಕದ ಮನೆಯಲ್ಲಿ ಧಾರೆ ಮುಹೂರ್ತ. ನಮ್ಮನೆ ಮುಂದಿನ ರೂಮಿನಲ್ಲಿ ಬೀಗರಿಳಿದಿರುತ್ತಾರೆಂದು ಆತ ಹೇಳಿದ. ನಾನು ಬೇಡವೆಂದರೆ ನನ್ನಾಕೆ ತನ್ನ ಸ್ನೇಹಿತಳ ಮಗಳ ಮದುವೆಗೆ ಜಾಗಾ ಕೊಡದೆ ಸತಾಯಿಸಿದನೆಂದು ಎಲ್ಲಿ ರೇಗುವಳೋ ಎಂದು ಹೂಂಗುಟ್ಟಿದೆ. ಗಂಟೆಯೊಳಗಾಗಿ ಆರು ಜಟಕ ಬಂದುಬಿಡೋದೇ, ನಾನು ಬಲು ಶಿಸ್ತಿನ ಮನುಷ್ಯ. ನನ್ನ ಪ್ರಾಣವೆಂದರೆ ನನ್ನ ನಡುಮನೆ ಅದರ ರತ್ನಗಂಬಳಿ. ಆ ಗೋಡೆಯ ಚಿತ್ರಗಳು.

ಆದರಲ್ಲೂ ನಂದಾಲಾಲನ ಮುಚ್ಚಂಜಿ ಎದುರುಗೋಡೆಗೆ ಹಾಕಿದ್ದು. ಮಧ್ಯದ ಪುಟ್ಟ ಮೇಜು ಸುತ್ತಲಿನ ಮೆತ್ತೆಯ ಕುರ್ಚಿ ಎಲ್ಲಾ ನಾನು ಕಾಪಾಡಿಕೊಂಡು ಬಂದ ಪ್ರಿಯ ವಸ್ತುಗಳು. ನಡುಮನೆಗೆ ಬರಕೂಡ ದೆಂದು ಹೇಗೆ ಹೇಳುವುದು. ಬಂದವರು ಆರು ಜಟಕ-(ಹೆಂಗಳು, ಗಂಗಳು, ಮಂಗಳು)-ಜನ. ಮೊದಲು ಬಂದಾಕೆ ಚೂಪುಮೂಗಿನ ಬಿಳಿಯ ತಟ್ಟೆ ತಲೆಯ ಅಗಲಗಣ್ಣಿನ ಹಿರಿಯ ಮುತ್ತೈದೆ. ಆಕೆ ಕನ್ನಡಕ ಹಾಕುತ್ತಿದ್ದು ದರಿಂದ ನೇರವಾಗಿ ನಡುಮನೆಗೆ ಬಂದಿರಬಹುದೆಂದು ಸುಮ್ಮನೆ ಇದ್ದೆ. ನನ್ನಾಕೆ ಕಡೆ ನೋಡಿದೆ. ಗಂಟು ಮುಖಹಾಕಿ ಸಿಟ್ಟಿನಿಂದ ನನ್ನ ನೋಡಿದಳು. ಬಂದವಳು 'ಬನ್ನಿ ಅಲ್ಲಿ ಕಿಷ್ಕಿಂಧ' ಎಂದಳು. ಬಂದರು. ಗುಲಾಬಿ ಸೀರೆಯ ಚಲುವೆ ಬಗಲಲ್ಲಿ ಸಿಂಬಳ ಮೂಗಿನ ಚಿಕ್ಕ ಮರಿ, ಹುಳುಕು ಮುಖದ ಮುಕುಂದರಾಯನಂತಹರಿಬ್ಬರು, ಚೂಪು ಮೂಗಿನ ದಿನ್ನೊಂದು, ಕಡೆಗೊಬ್ಬರು ಬಂದರು........ಇಡೀ ನಡುಮನೆಗೆ ಭೂಷಣ ಪ್ರಾಯಳು, ಗುಜ್ಜಾನೆ ಮರಿಗೆ ಸೀರೆ ಉಡಿಸಿ ಕನ್ನಡಕ ಹಾಕಿ ಪುಟ್ಟಿ ತುರುಬಿದ್ದರೆ ಕುಚ್ಚು ಹೂ ಮುಡಿಸಿದರೆ ಹೇಗಿರುತ್ತೋ ಹಾಗಿರುವ ಹೆಂಗಸು ಬಂದು ನನ್ನ ಪ್ರಿಯ ಮೆತ್ತೆಯ ಕುರ್ಚಿಯನ್ನು ಅಲಂಕರಿಸೇ ಬಿಟ್ಟಳು.

ನಾನು ಅಲ್ಲಿಂದ ಏಳಲೇ ಬೇಕಾಯಿತು. ಎದ್ದು ಬಾಗಿಲ ಬಳಿ ನಿಂತಿದ್ದ ನನ್ನ ಅರ್ಧಾಂಗಿ ಬಳಿ ಹೋದೆ ಕಡೆಗೆ ಇಬ್ಬರೂ ಅಡಿಗೆ ಮನೆಗೆ ಹೋದೆವು. ಬಾಗಿಲು ಮುಚ್ಚಿದಂತಾಯಿತು ತಿರುಗಿನೋಡಿದೆ. ಗುಜ್ಜಾನೆ ಮರಿ! "ಒಂದು ಚೊಂಬಿದ್ರೆ ಕೊಡಿ" ಎಂದಳು. ನನ್ನಾಕೆ ಎದ್ದು ಒಂದು ಚೊಂಬು ಕೊಟ್ಟಳು. ಅದನ್ನು ತೆಗೆದುಕೊಂಡು ಮತ್ತೆ ನಡುಮನೆಗೆ ಬಂದಳು. ಅಷ್ಟರಲ್ಲಿ ಪಕ್ಕದ ಮನೆಯಿಂದ ದೊಡ್ಡದೊಂದು ಕೊಳಗದ ತುಂಬ ಉಪ್ಪಿಟ್ಟು ಹೊತ್ತು ಇಬ್ಬರು ಹನುಮಂತರಾಯನಂತಹವರು ಬಂದರು. 'ಎಲ್ಲಾ ಬೇಗರು ಕೊಳ್ಳಿ, ಇಸ್ಕೊಳ್ಳಿ' ಎಂದೆನ್ನುತ್ತ ಕಾಫಿ ಉಪ್ಪಿಟ್ಟಿನ ಸಂತರ್ಪಣೆಗೆ ಪ್ರಾರಂಭವಾಯಿತು. ಹೊರಗಡೆ ಜಟಕಾ ದವನು ಟ್ರಂಕು ಹಾಸಿಗೆಗಳನ್ನು ಹೊತ್ತು ಎಲ್ಲಿಡಬೇಕೆಂದು ಕೇಕೆ ಹಾಕು ತ್ತಿದ್ದುದನ್ನು ತಿರುಪಿನ ಚೊಂಬಿಗೆ ಕಾಫಿ ಹೊಯಿಸಿಕೊಳ್ಳುತ್ತಿದ್ದ ಗುಜ್ಜಾನೆ ಮರಿ ಕಂಡು ಇಲ್ಲೇ ಹಾಲಿನಲ್ಲಿಡು ಎಂದು ನಂದಲಾಲನ ಮುಚ್ಚಂಜಿ

ಮೂಲೆ ತೋರಿಸಿಬಿಟ್ಟಳು. ಆ ಸಾಬಿ ಆ ನನ್ನ ಪ್ರಾಣಚಿತ್ರದ ಕೆಳಗೆ ಟ್ರಂಕುಗಳನ್ನಿರಿಸಿ ಅದರ ಮೇಲೆ ಹಾಸಿಗೆ ಇಟ್ಟು ಅವನೂ ಒಂದು ಲೋಟ ಕಾಫಿ, ಎಲೆ ಉಪ್ಪಿಟ್ಟು ಗಿಟ್ಟಿಸಿ, ಸಲಾಮು ಹೊಡೆದು ಹೋಗುವ ಭರದಲ್ಲಿ ನನ್ನ ನಡುಮನೆಯ ಹೊರಬಾಗಿಲ ಪರದೆ ಹರಿದೇ ಹೋದ. ನನ್ನ ಮೈಗೆ ಜ್ವರ ಬಂದವರ ತಾಪ ತಟ್ಟಿದಂತಾಗತೊಡಗಿತು. ನನ್ನದು ಮೆದುಸ್ವಭಾವ. ಕಟ್ಟುಸಿಟ್ಟಾಗಿ ಎಂದೂ ಯಾರಿಗೂ ಅಂದವನಲ್ಲ. ಇನ್ನು ಈ ಮದುವೆ ಯವರಿಗೆ ಹೇಗೆ ಅನ್ನಲಿ, ಹೇಗೆ ಹೇಳಲಿ, ಒಳಗೊಳಗೇ ಕೊರಗುತ್ತಿದ್ದೆ. ನನ್ನಾಕೆಯ ಸ್ನೇಹಿತಳಾರು, ಆ ಪುಣ್ಯಾತ್ಗಿತ್ತಿ ಬಂದರೆ ಈ ನನ್ನಾಕೆ ಅವ ಳಿಗೆ ಹೇಳಿ ಈ ಹಾವಳಿಯನ್ನು ಮುಂದಿನ ರೂಮಿಗೆ ಸಾಗಿಸಿಬಿಟ್ಟರೆ ಅರ್ಧ ಕೆಟ್ಟ ನನ್ನ ನಡುಮನೆಯನ್ನು ಊರ್ಜಿತ ಮಾಡೇನೆಂದು ಕಾದಿದ್ದೆ. ಇಷ್ಟ ರಲ್ಲಿ ಎರಡು ತುಂಟ ಮಕ್ಕಳು (ಮಂಗಳು?) ಹೊಡೆದಾಡಿ ಹಟಕ್ಕೆ ನಿಂತವು. ಅವುಗಳನ್ನು ಸಮಾಧಾನಪಡಿಸಲು ಆ ಗುಜ್ಜಾನೆಮರಿ ನನ್ನ ಪ್ರೀತಿಯ ನಂದಲಾಲನ ಮುಚ್ಚಂಜೆ ತೆಗೆದು ಆಡುವುದಕ್ಕೆ ಕೊಟ್ಟಿದ್ದು ಕಣ್ಣಾರೆ ನೋಡಿದೆ....ಭೊಳಿ ಬಂದಂತಾಗಿ ಹೊರಕ್ಕೆ ಬಂದುಬಿಟ್ಟೆ. ಮಸಕು ಮಸು ಕಾಗಿ ನನ್ನ ಪ್ರಿಯ ರತ್ನಗಂಬಳಿಯ ಮೇಲಿನ ಕಾಫಿ ಚೆಲ್ಲಿದ ಗುರುತು ಕಂಡು ಮುಂದಿನ ಪಡಸಾಲೆಯಲ್ಲಿ ಕುಕ್ಕುರಿಸಿ ಕುಳಿತೆ.

ನನ್ನಾಕೆ ಬಂದು ಕುಳಿತಳು. ಒಂದು ಲೋಟ ಸಕ್ಕರೆ ಪಾನಕ ಬೇಕೆಂದು ಹೇಳಿದೆ. ತಂದುಕೊಟ್ಟಳು. ಕೊಂಚ ಸ್ಥಿಮಿತಕ್ಕೆ ಬಂದೆ. ಕಣ್ಣು ಕಾಣಿಸತೊಡಗಿತು. ಆದರೂ ಸಂಕಟ. "ಹೊರಗಚ್ಚೆ ತೀಡಿ ಹಾಕಿದ ಕೊಂಚ ಕಪ್ಪನೆಯ ಗರುಡನಂತಹ ಹೆಂಗಳೊಂದು ನಾವಿದ್ದಲ್ಲಿಗೂ ಬಂದು "ಮೀನಾಕ್ಷಮ್ಮನೋರ್‍ಯಾರು" ಎಂದಳು, ನನ್ನಾಕೆಯನ್ನು ಕೇಳಿಕೊಂಡು ಬಂದರೆಂದು ಇನ್ನು ನನ್ನ ನಡುಮನೆ ಬದುಕಿತೆಂದು ಹಿಗ್ಗಿದೆ. "ಏನು ಬೇಕಿತ್ತು" ಎಂದಳು ಎನ್ನರಸಿ "ಅಚ್ಚಮ್ಮ ಹೇಳಿದರು ಬಾಗಿನ ಖಣ ಸಿಂಧೂಪದ ಸೀರೆ ತೆಕ್ಕೊಂಡಿ, ಬೇಕು" ಎಂದಳು........ನನ್ನಾಕೆಗೆ ಇದೊಂದೂ ಗೊತ್ತಾಗದೆ ನಡುಮನೆ ತೋರಿಸಿದಳು........ಆ ಗರುಡ ನಡುಮನೆ ಹೊಕ್ಕು ಇನ್ನೂ ಕೃಷ್ಣ ಪ್ರತ್ಯಕ್ಷನಾಗುವುದು ಬಾಕಿ. ಕಿಟಕಿಯಲ್ಲಿ ನೋಡಲಾಗಿ ಆ ಗುಜ್ಜಾನೆಯ ಮರಿಯೇ ಮೀನಾಕ್ಷಮ್ಮನಾಗಿದ್ದಳು.

" ಅಲ್ಲಿ ಅದ್ಯಾರೆ ನಿನ್ನ ಸ್ನೇಹಿತೆ ಅವಳಿಗೆ ಹೇಳಿ ನಡುಮನೆಯಿಂದ ಹೊರಗಿನ ರೂಮಿಗೆ ಬರೋಹಾಗೆ ಮಾಡೆ"

" ನನ್ನ ಸ್ನೇಹಿತೆ ಯಾರೂಂದ್ರೆ "

" ನಶ್ಯವಂತ ಹೇಳಿದನಲ್ಲೇ ನಿನ್ನ ದೂರದ ಬಳಗಾನ........"

" ಆ ಗುಜ್ಜಾನೆಮರಿ ಹೇಳ್ತಲ್ರಿ ನಿಮ್ಮ ಬಳಗಾನ ನಿಮ್ಮ ಸೋದರತ್ತೆ ಮಾವನ ತಮ್ಮನ ಸೊಸೆ ಮಗನದಂತಲ್ರಿ ಮದುವೆ"

" ಇದೇನೆ ಹೀಗಂತಿ ! ....ಅಲ್ನೋಡು ಪಕ್ಕದ ಮನೆ ಶಾಮರಾಯರು ಹೊರಗೆ ಗುಂಡಿಟ್ಟು ನೀರು ಕಾಯಿಸ್ತಾ ಇದಾರೆ........ಏನು ಶಾಮರಾಯರೆ ........ಹೊರಗೆ ನೀರು "

" ಹೌದು ರಾಯರೆ ನಮ್ಮ ಸ್ಥಿತಿ ನೋಡಿ ಯಾರೋ ಈಕೆ ಬಳಗವಂತೆ....ಮಾತಾಡಿಸಿದವರಿಗೆಲ್ಲಾ ಮಸಾಲೆ ಕೊಡಿಸೋಕೆ ಮಾವನ ಮನೆ ದುಡ್ಡಿಲ್ಲ........ಅಂತ ಹೇಳಿದೆ....ನನಗೇ ದಬಾಯಿಸಿದಳು........ಲಗ್ನದವರು ನಿಮ್ಮ ಬಳಗಾ. ಅನುಭವಿಸಿ ಅಂತ"

" ಯಾರಿಗೆ ಯಾರೋ ಪುರಂದರ ವಿಠಲ. ಮುಖ್ಯ ಒಂಟಿ ಸಹವಾಸ ಸ್ವಾಮಿ...." ಎಂದು ನಿಟ್ಟುಸಿರಿಟ್ಟೆ. ವಾಲಗ ಜೋರಾಗಿ ಊದತೊಡಗಿತು.



# ಪದ್ಮ



ಎಲ್ಲರಿಗೂ ಇರುವಂತೆ ನನಗೂ ಹೊಸದಾಗಿ ನಮ್ಮ ಮನೆ ಪಕ್ಕದ ಮನೆಗೆ ಬಂದವರ ವಿಷಯ ತಿಳಿದುಕೊಳ್ಳಬೇಕೆಂದು ಆಸೆ. ಬಹಳ ದಿನದಿಂದ ನೆರೆಮನೆಯವರಿಲ್ಲದೆ ನಮ್ಮ ಅಮ್ಮನಿಗೂ ಬೇಜಾರಾಗಿತ್ತು, ಸಮಯಬಂದರೆ ಒಂದು ಲೋಟ ಕಾಫಿಪುಡಿ ಎರವು ತರೋದಕ್ಕೆ ಅನುಕೂಲವಾದೀತು' ಎಂದು ಅಮ್ಮನ ಆಸೆ. ಸಂಜೆಯಲ್ಲಿ ಹರಟೆ ಕೊಚ್ಚಬಹುದೆಂದು ಒಂದು ಸಂತೋಷ. ನನಗೂ ಅವರ ಮನೆಯಲ್ಲಿ ಹುಡುಗರಿದ್ದರೆ ಜೊತೆಯಾಗುತ್ತೆಂಬ ಆಸೆ—ಆದರೆ ನನ್ನ ಸ್ನೇಹಿತರಾಗುವಂಥ ಕಾಲೇಜಿನ ಹುಡುಗರಿರಲಿಲ್ಲ. ನಮ್ಮ ತಂದೆಯವರಿಗೂ ನೆರೆಮನೆ ಯಜಮಾನರಿಗೂ ಸ್ನೇಹವೊನ್ನೆ ಆಯಿತು. ನೆರೆಮನೆ ಯಜಮಾನರು ಹೆಚ್ಚು ಮಾತಿನವರಲ್ಲ; ನಮ್ಮಪ್ಪ ವಿಪರೀತ ಮಾತಿನವರು. ಅಂತೂ ಅಪ್ಪನಿಗೆ ಅಮ್ಮನಿಗೆ ಅವರ ಗುರುತಾಯಿತು. ಇಷ್ಟಕ್ಕೂ ಯಳಂದೂರು ಶಾಮರಾಯರು ಖಾಸ ಇವರ ಚಿಕ್ಕಪ್ಪನ ತಂಗಿ ಮಗಳ ಗಂಡನಂತೆ. ಶಾಮರಾಯರಿಗೂ ನಮ್ಮಪ್ಪನಿಗೂ ಕಾಫಿಪುಡಿ ಸಕ್ಕರೆಯಷ್ಟು ಸ್ನೇಹ. ಅಂದ ಮೇಲೆ ಖಂಡೇರಾಯರು

ಇಷ್ಟು ಬೇಗ ನಮ್ಮಪ್ಪನಿಗೆ ಆಪ್ತ ಸ್ನೇಹಿತರಾದುದಕ್ಕೆ ಆಶ್ಚರ್ಯವೇಕೆ? ಅಂತೂ ಪಕ್ಕದ ಮನೆಯವರು ಯಾರೋ ಅಂತಿದ್ದರೆ ಹತ್ತಿರದವರೇ ಆದರು.

ಖಂಡೇರಾಯರ ಭಾರ್ಯೆ ಮೀನಾಕ್ಷಮ್ಮನವರು ಕಲಿತವರು. ನಮ್ಮಮ್ಮ ಹಾಲು ಮೊಸರಿನ ಲೆಖ್ಖ ಹಾಕಲು ಬರುವಷ್ಟು ಕಲಿತಿದ್ದಾಳೆ. ಖಂಡೇರಾಯರಿಗೆ ಗೀತೆಯಲ್ಲಿ ಆಸೆ; ನಮ್ಮಪ್ಪ ಗೀತೆಯಲ್ಲಿ ಎತ್ತಿದ ಕೈ. ಮೀನಾಕ್ಷಮ್ಮ ನಮ್ಮಮ್ಮನಿಗೆ ಕತೆ, ಓದುತ್ತ ಅಡಿಗೆಯ ಮನೆಯ ಬಳಿಯಲ್ಲಿ ಕುಳಿತಿದ್ದುದೂ ನಮ್ಮಪ್ಪ ಹೊರಗಿನ ಕೋಣೆಯಲ್ಲಿ ಖಂಡೆರಾಯರೆದುರು "ಸುಖದುಃಖೇ ಸಮೇಕೃತ್ವಾ........" ಶ್ಲೋಕದ ಅರ್ಥ ಹೇಳುತ್ತಿದ್ದುದೂ ನಾನು ಗೆಳೆಯರಿಲ್ಲದೆ ನನ್ನ ರೂಮಿನಲ್ಲಿ ಮಿಕಮಿಕ ಕಣ್ಣುಬಿಡುತ್ತಾ, ಕುಳಿತಿರುವುದೂ ದಿನಚರಿಯಾಗಿಬಿಟ್ಟಿತ್ತು. ಥೂ! ಊರ ಹೊರಗೆ ಎರಡೇ ಮನೆ ಇರಬಾರದು............ಸ್ನೇಹಿತರು ಬರುವಹಾಗಿಲ್ಲ; ಹೋಗುವ ಹಾಗಿಲ್ಲ.

ಮೀನಾಕ್ಷಮ್ಮನವರು ಅವರ ಮನೆಯಲ್ಲಿದ್ದಾಗ ಆಗಿಂದಾಗ "ಪದ್ಮಾ ಊಟಕ್ಕೇಳು....ಪದ್ಮಾ ನೀರುಕೊಡು....ಪದ್ಮಾ" ಎಂಬ ಕೂಗು ಕೇಳಿಬರುತ್ತಿದ್ದಿತು. ಈ ಪದ್ಮ ಯಾರಿರಬಹುದು? ಎಂಬ ಯೋಚನೆ ನನ್ನ ಹರೆಯದ ತಲೆಯಲ್ಲಿ ಗಲಾಟೆ ಮಾಡತೊಡಗಿತು. ಗಂಡುಮಕ್ಕಳಿರಲಿಲ್ಲ ಖಂಡೇರಾಯರಿಗೆ—ಈ ಪದ್ಮ ಅವರ ಏಕಮಾತ್ರ ಪುತ್ರಿ ಕಂಠೀರವಿ ಇರಬಹುದೇ? ಇಲ್ಲ; ಅವರಿಗೆ ಮಕ್ಕಳಿದ್ದಂತೆ ತೋರಲಿಲ್ಲ, ಇದ್ದಿದ್ದರೆ ನಮ್ಮ ಮನೆಗೆ ಬರದೆ ಇರುತ್ತಿದ್ದರೆ? ಮತ್ತೆ ಈ ಪದ್ಮ ಯಾರು? ಅಮ್ಮನ್ನ ಕೇಳೋಣವೆಂದರೆ ಆ ಪದ್ಮ ಹರೆಯದ ಹುಡುಗಿ ಆಗಿರೋಣ. "ಅವಳ ವಿಷಯ ನಿನಗೇಕೋ ಪೋಕರಿ" ಅಂತ ನನ್ನ ಗದುರಿಸಿದರೆ? ಕಾಲೇಜಿನವನಾದರೂ ಅಮ್ಮನಿಗೆ ನಾನು ಕೂಸೇ. ಬಯ್ಯೋದರಲ್ಲಿ ಅಮ್ಮ ಇನ್ನೂ ನನ್ನನ್ನ ಮಗುವೆಂದೇ ತಿಳಿದಿರಬೇಕು. ಇದರಿಂದ ಅಮ್ಮನ್ನು ಕೇಳೋದಕ್ಕೆ ಆಗುವುದಿಲ್ಲ. ಅಪ್ಪನ್ನ ಹೇಗೆ ಕೇಳೋದು....ಆಮೇಲೆ ಮುಂದಿನ ಮಾಘದಲ್ಲೇ ಲಗ್ನ ಏರ್ಪಡಿಸಿದರೆ ಕಷ್ಟ! ಓದು ಮುಗಿಯೋವರೆಗೂ ಮದುವೆ ಬೇಡಾ ಅನ್ನೋ ಪ್ರತಿಜ್ಞೆ ಮುರಿಯೋ ಸಂಥರ್ಭ ಬಂದೀತೆಂಬ ಹೆದರಿಕೆ. ಪುರಾಣ ಬೇಡ; ಅಪ್ಪನ್ನ

ಕೇಳೋಹಾಗಿಲ್ಲ. ಇನ್ನು ಸಮಸ್ಯೆ ಬಿಡಿಸೋ ಬಗೆ? ಬಗೆಹರಿಯದ ಸಮಸ್ಯೆ.

ದಿನಕಳೆದಂತೆ 'ಪದ್ಮ' ಹೆಚ್ಚು ಕಷ್ಟದ ಲೆಖ್ಖವಾದಳು; ಚಿಟ್ಟನೆ ಚೀರಿದರೂ ಲೆಖ್ಖದ ಉತ್ತರ ಸಿಗಲಿಲ್ಲ. ನನ್ನ ಭಾವನಾ ಪ್ರಪಂಚದಲ್ಲಿ ಒಂದು ದೊಡ್ಡ ಚಿತ್ರವನ್ನೇ ಚಿತ್ರಿಸಿದೆ. ಪದ್ಮ ಚಲುವಿನ ಬಳ್ಳಿ, ಗುಲಾಬಿ ಕೆನ್ನೆ, ಬಳ್ಳಿಯಂಥ ಮೈ, ಬೊಗಸೆ ಕಣ್ಣು, ಉದ್ದನೆಯ ಕಪ್ಪುರೆಪ್ಪೆ. ಕೊಂಕು ನಡಿಗೆ ಬಿಂಕದ ಭಾವ....ಅಂತಹ ಚಲುವೆ ನನ್ನ ಅರ್ಧಾಂಗಿ ಯಾದರೆ? ನನ್ನಂಥ ಸುಖಿಯಾರೂ ಇಲ್ಲ. ನಾನು ಪದ್ಮ – ನಿತ್ಯ ವಾಕಿಂಗ್ ಹೋಗಬೇಕು. ನನ್ನ ರಾಣಿ ನೀಲಿಸಿಲ್ಕಿನ ಸೀರೆ, ನೀಲಿ ಬ್ಲೌಜು, ನೀಲಿ ಹೂವು, ನೀಲಿಹರಳಿನ ಉದ್ದನೆ ಲೋಲಾಕು, ನೀಲಿ ಪಟ್ಟೆಯ ಮೆಟ್ಟುಹಾಕಿ ಕೊಂಡು ನನ್ನ ಕೈಯಲ್ಲಿ ಕೈಹಾಕಿಕೊಂಡು ತುಂಬಿದ ಬೆಳದಿಂಗಳಲ್ಲಿ ನಡೆದರೆ ...... ಹೇಗಿರಬೇಕು....ನಡೆದರೇ ಗೊತ್ತು ಆ ಸುಖ! ಇವೆಲ್ಲಾ ಕನಸಾಗ ದಿರಲೆಂದು ದೇವರಿಗೆ ಪ್ರತಿ ಶನಿವಾರ ಕಾಯಿ ಒಡೆಸುವುದಾಗಿ ಬೇಡಿಕೊಂಡೆ. ಅದೇಕೆ? ಪದ್ಮ ಒಂದು ದಿನವಾದರೂ ನನ್ನ ಕಣ್ಣಿಗೆ ಬೀಳಲಿಲ್ಲ. ಪಾಪ ಅವಳಿಗೆ ನಾಚಿಕೆ. ಅರಿಯದ ಹುಡುಗಿ ಚಲ್ಲು ಚಲ್ಲು ಬಡಿಯುತ್ತಾ ಬೀದಿಯಲ್ಲಿ ಕುಣಿದರೆ ನೋಡಿದವರೇನೆಂದಾರು. ಬೇಡ ಹಾಗೆ ಕುಣಿ ಯೆಂದು ಯಾರು ಹೇಳಿದರವಳಿಗೆ; ತೀರ ಘೋಷಾ ಹೆಂಗಸಿನಂತಾಗಿಬಿಟ್ಟರೆ ಹೇಗೆ? ನಾನೂ ಎಷ್ಟೋ ಜನ ಹುಡುಗಿಯರನ್ನು ನೋಡಿದ್ದೀನಿ. ಆದರೆ ಈ ನಮ್ಮ ಪದ್ಮಳಂಥವಳನ್ನು ಎಲ್ಲೂ ನೋಡಿಲ್ಲ. ಬೆಳಕು ಕಂಡರೆ ಬಾಡಿ ಹೋಗುವಳೆಂದು ಹೊರಕ್ಕೆ ಬಾರದಿರಬಹುದೆ? ಅಂತೂ ಪದ್ಮ ಸಮಸ್ಯೆಯ ಹುಡುಗಿ ಆಗಿಹೋದಳು.

ನೆನ್ನೆ ಖಂಡೇರಾಯರ ಮನೆಯಿಂದ ಇಂಪಾದ ಗಾನ—ಅಚ್ಚ ಕನ್ನಡದ ದಾಸರ ಪದಗಳು—ಕೇಳಿಬಂತು. ಪರವಾಗಿಲ್ಲ ಪದ್ಮ ಸಂಗೀ ತಾನೂ ಕಲಿತಿದಾಳೆ. ನಮ್ಮ ತಂದೆಯವರು ಆಗಿಂದಾಗ ಅವರ ಮನೆ ಯಿಂದ ಕತೆಪುಸ್ತಕಗಳನ್ನು ತರುತ್ತಿದ್ದರು. ಒಂದು ಸಾರಿ ಪುಸ್ತಕದ ಜೊತೆಗೆ ಸಣ್ಣಮಕ್ಕಳ ಆನೆ ಕುದುರೆ ಪುಸ್ತಕ ಒಂದು ಇತ್ತು. ಅದರ ಮೇಲೆ 'ಪದ್ದು' ಎಂದು ಬರೆದಿತ್ತು. ನನ್ನ ಮೋಹಿನಿಯ ಹೆಸರು ನೋಡಿ ಹಿಗ್ಗಿ

ಹೋದೆ. ಅ. ನ. ಕೃ.ರ 'ಸಂಧ್ಯಾರಾಗ', ಶರ್ಮರ 'ಪರ್ಣಕುಟಿ' ಮೇಲೆ ಇವಳ ಹೆಸರಿಲ್ಲದೆ ಶಿಶುಸಾಹಿತ್ಯದ ಮೇಲೇಕೆ ಈ ಚೆಲುವೆಯ ಹೆಸರು? ಎಂಬ ಪ್ರಶ್ನೆ ನನಗೆ ಎರಡು ದಿನ ನಿದ್ರೆ ತರಲಿಲ್ಲ. ಮೊನ್ನೆ ನಮ್ಮ ತಾಯಿ ಯವರ ಜೊತೆಗೆ ಮೀನಾಕ್ಷಮ್ಮನವರು ಹಪ್ಪಳ ಲಟ್ಟಿಸುವುದರಲ್ಲಿ ನೆರವಾ ಗಿದ್ದರು. ನಾನು ಅಲ್ಲೇ ದೋಸೆ ತಿನ್ನುತ್ತ ಕುಳಿತಿದ್ದೆ. ಹಾಗೆ ಮೀನಾಕ್ಷಮ್ಮ ನವರನ್ನು ನೋಡಿದೆ. ೩೦ ವರ್ಷ ಇರಬಹುದು. ಬೊಂಬಾಯಿ ಗಂಟಿನ ತುರುಬು, ಸಾದಾ ಸೀರೆ. ಅರಿಸಿನ ಗೆನ್ನೆಯ ಚಲುವು ಮುತ್ತೈದೆ. ಇವರ ರೂಪಿನಂತೆ ನನ್ನ ಪದ್ಮ ಇರಬಹುದು ಎಂದು ಲೆಖ್ಖಾಚಾರ ಹಾಕಿದೆ. ಮೀನಾಕ್ಷಮ್ಮನವರು "ನಿಮ್ಮ ವಾಸುಗೆ ಎಷ್ಟು ವಯಸ್ಸು?" ಎಂದರು. ನನಗೆ ಒಂದು ತರಹ ಆಯಿತು. ಭಾವಿ ಅತ್ತೆ ಭಾವಿ ಅಳಿಯನ ವಯಸ್ಸು ಕೇಳಿದಂತೆ ಭಾಸವಾಯಿತು. "೨೨ ವರ್ಷ ನೋಡಿ. ಬೇಗ ಮದುವೆ ಮಾಡೋಣವೆಂದರೆ ಬೇಡಾಂತಾನೆ. ೨೨ ವರ್ಷ ಬೇಗಲೇ?" ಎಂದಳು ನಮ್ಮಮ್ಮ. "೨೨ ವರ್ಷ ಏನು ಬೇಗ ಇದೇ ಸರಿಯಾದ ವಯಸ್ಸು ಎಂದರು. ನನ್ನ ಭಾವಿ ಅತ್ತೆ ತಮ್ಮ ಮಗಳನ್ನು ಮಾಡಿಕೊ ಎನ್ನುವುದಕ್ಕೆ ಇದು ಪೀಠಿಕೆ ಎಂದೆಂದುಕೊಂಡೆ. "ಓದೋದು ಮುಗಿಯಲಿ ಅಂತ ಅಷ್ಟೆ" ಇದು ನನ್ನ ಉದ್ಗಾರ. ಇಷ್ಟು ಹೊತ್ತಿಗೆ ನನ್ನ ದೋಸೆ ಮುಗಿಯಿತು ಎದ್ದು ಹೊರಡಬೇಕಾಯಿತು.

ಕೈತೊಳೆದು ಒರೆಸಿಕೊಳ್ಳುತ್ತ ಅಲ್ಲೇ ನಿಂತಿದ್ದೆ. ತಮ್ಮ ಪದ್ದುಗೆ ೧೬ ........ಎಂದದ್ದು ಕೇಳಿ ನನಗೆ ಮೈ ರೋಮಾಂಚವಾಯಿತು. ನಿಶ್ಚಯವಾಗಿ ಪದ್ಮಳನ್ನು ನನಗೆ ಕೊಡುವ ಯೋಚನೆ ನಡೆಸಿದ್ದಾರೆಂದು ತಿಳಿದು ಹಿರಿಹಿರಿ ಹಿಗ್ಗಿ ಹೋದೆ.

ನಮ್ಮ ತಂದೆಯವರು ವಾಪಸ್ಸು ಕೊಡಲು ಹೇಳಿದ ಪುಸ್ತಕದ ಕಂತೆ ಹಿಡಿದು ಖಂಡೇರಾಯರ ಮನೆಗೆ ಕಾಲಿಟ್ಟೆ........ಅತ್ತ ಇತ್ತ ಸುತ್ತಲೂ ನೋಡಿದೆ....ನನ್ನ ಪದ್ದು ಕಣ್ಣಿಗೆ ಬಿದ್ದಾಳೇನೊ ಎಂಬ ಭ್ರಮೆ. ಆರಾಮ ಕುರ್ಚಿಯಮೇಲೆ ಗೀತೆ ಹಿಡಿದು ಕುಳಿತಿದ್ದ ಖಂಡೆರಾಯರು "ಬಾಪ್ಪ ಮಗು", ಎಂದು ಆಹ್ವಾನಿಸಿದರು. "ನಮ್ಮ ತಂದೆಯವರು ಈ ಪು...." "ಸರಿ ಪುಸ್ತಕ ತಂದಿದ್ದೀಯ ಅಲ್ಲಿಡಪ್ಪ" ಎಂದು ನನ್ನ ಮಾತು ಮುಗಿಯೋ

ದರಲ್ಲೇ ಮುಗಿಸಿಬಿಟ್ಟರು. ನನ್ನ ಅಲ್ಲೇ ಕೂಡಿಸಿ "ಲೇ ವಾಸು ಬಂದಿದ್ದಾನೆ ಕೊಂಚ ಕಾಫೀ, ಗೀಫಿ....", ಎಂದು ಹೇಳುತ್ತಲೇ ಒಳಕ್ಕೆಹೋದರು. ಪದ್ದು ಕೈಯಿಂದಾನೇ ಕಾಫಿ ಕಳಿಸುವರೆಂದು ಆಸೆಯಿಂದ ಇದ್ದೆ. ಹಾಗೇ ರೂಮನ್ನೆಲ್ಲಾ ಸರ್ವೆ ಮಾಡಿದೆ. ಎಲ್ಲ ಪಠಗಳ ಮಧ್ಯೆ ಇದ್ದ ಚಿತ್ರ ನೋಡಿ ಅದನ್ನೇ ನೋಡಬೇಕೆಂದೆನಿಸಿತು. ಅದು ಓರ್ವ ಸುಂದರ ತರುಣಿಯ ಚಿತ್ರ....ಅದು ಪದ್ದುದೇ ಆಗಿರಬಹುದೆಂದು ನಿಶ್ಚಯಿಸಿದೆ, ಕಳ್ಳ ಪದ್ಮ ಮುಖ ತೋರಿಸದಿದ್ದರೂ ಚಿತ್ರ ನೋಡಿದೆನಲ್ಲಾ; ಈ ಚಿತ್ರ ಕದ್ದೊಯ್ಯಲೆ ಎನಿಸಿತು. ಅಷ್ಟರಲ್ಲಿ ಖಂಡೇರಾಯರೇ ಎರಡು ಲೋಟಾ ಹಿಡಿದುಬಂದರು. ಪದ್ಮಳಿಗೆ ಪಾಪ ನಾಚಿಕೆ ಎಂದುಕೊಂಡೆ. ಕಾಫಿ ಕುಡಿದು ಆ ನನ್ನ ಮುಗ್ಧಮೋಹನ ವದನೆಯ ಫೋಟೋವನ್ನೇ ನೆನೆದುಕೊಂಡು ಈ ಹಾಳು ಪದ್ದಿ ಏಕೆ ಮುಖ ತೋರಿಸಲೊಲ್ಲಳು? ಇಷ್ಟ ನಾಚಿಕೆಯಾದರೇ ಕಷ್ಟ.... ನನ್ನ ಕೈ ಹಿಡಿದ ಮೇಲೆ ಇದನ್ನೆಲ್ಲಾ ಬಿಡಿಸಬೇಕೆಂದು ಯೋಚಿಸುತ್ತಾ ಮನೆ ಸೇರಿದೆ.

"ಮಗು ನಿನಗೆ ಸಾಯಂಕಾಲದ ಹೊತ್ತು ಪುರುಸೊತ್ತಾಗುತ್ತದೆಯೆ?"

"ಯಾತಕ್ಕಮ್ಮ"

"ಮೀನಾಕ್ಷಮ್ಮನವರು ಏನೋ ಹೇಳಿದರು ನಿನ್ನ ಕೇಳೋಣಾಂತ" ಹೀಗೆಂದ ಕೂಡಲೆ ನನಗೆ ಒಂದು ತರಹ ಆಯಿತು. ಭಾವಿ ಅತ್ತೆ ಅದೇನು ಹೇಳಿರಬಹುದು ಎಂದು ಆತುರದಿಂದ "ಏನಮ್ಮ ಅವರು ಅಂದದ್ದು" ಎಂದೆ.

"ಅವರ ಪದ್ಮಂಗೆ........ಕೊಂಚ ಪಾಠವಂತೆ ಹೇಳಿ ಕೊಡ್ತೀಯಾ" ನಾನು ಅಮ್ಮನನ್ನು ನಂಬಲಿಲ್ಲ ಇದಕ್ಕಿಂತ ಅವಕಾಶ ಬೇಕೆ? ನನ್ನರಸಿಯನ್ನ ಮಾತಾಡಿಸೋಕೆ; ಮನದಣಿಯ ಅವಳ ಚಲುವಿನ ಮುಖ ನೋಡಿ ದಣಿಯೋದಕ್ಕೆ. ಅಮ್ಮ ಏನು ಹೀಗೆ ಹೇಳುತ್ತಿದ್ದಾಳೆ ಎಂದುಕೊಂಡೆ.

"ಮನೆ ಮಕ್ಕಳಿಗೆ ಅಪ್ಪನೇ ಹೇಳಿದ ಪಾಠ ಹಿಡಿಯೋದಿಲ್ಲ. ಬೇರೆ ಮೇಷ್ಟ್ರು ಬರುವುದಕ್ಕೆ ಮನೆ ದೂರ. ನೀನೇ ಇರೋವಾಗ ಇನ್ಯಾರೂ ಏಕೆ ಎಂದು ಮೀನಾಕ್ಷಮ್ಮನವರೂ ಹೇಳಿದರು. ನೋಡು, ಹೇಳಿಕೊಡು ಪಾಪ." ಎಂದಳು ನಮ್ಮಮ್ಮ.

"ಆಗಲಮ್ಮ ಅಷ್ಟು ಮಾಡದೇ ಏನು ನೆರಮನೆಯವರಿಗೆ" ಎಂದೆ ನಾನು. ಮನಸ್ಸಿನಲ್ಲೇ ಪದ್ಮಾನ ಕೈ ಹಿಡಿಯುವ ಮೊದಲೇ ಸಂಸಾರ—ಪ್ರೇಮ—ವಿತರಣೆ—ಪತಿ ಪರಾಯಣತೆಯ ಮೇಲೆ ಪಾಠ ಕಲಿಸಬಹುದೆಂದು ಹಿಗ್ಗಿದೆ.

ಮರುದಿನ ಸಂಜೆಗೆ ಪಾಠಕ್ಕೆ ಹೋಗುವ ಸಂಭ್ರಮ. ನನ್ನ ಸೂಟುಗಳಲ್ಲೆಲ್ಲಾ ಒಳ್ಳೆಯದನ್ನಾರಿಸಿ ಮದುವೆ ಗಂಡಿನಂತೆ ಸಿಂಗರಿಸಿಕೊಂಡು ನನ್ನ ಇನಿಯಳಾಗುವವಳಿಗೆ ಪಾಠ ಹೇಳಿಕೊಡಲು ಸಂಭ್ರಮದಿಂದ ಹೊರಟೆ. ಶಿಷ್ಯಳ ಮನೆಗೆ ಗುರು ಹೋಗುವ ಹಾಗೆ ಕಂಡಿತೋ ಇಲ್ಲಾ ನಲ್ಲೆಯೆಡೆಗೆ ನಲ್ಲ ತೆರಳುವ ಹಾಗಿತ್ತೋ ಆ ನನ್ನ ಗಮನ ; ನೋಡಿದವರಿಗೇ ಗೊತ್ತು.

ರೂಮು ಬಾಗಿಲು ಹಾಕಿತ್ತು ಮೆಲ್ಲಗೆ ತಳ್ಳಿದೆ. ಒಳಗೆ ಮೀನಾಕ್ಷಮ್ಮನವರಿದ್ದರು. ಇಂಪಾಗಿ ಸಣ್ಣಗೆ ಹಾಡುತ್ತಿದ್ದರು. "ಬಾಪ್ಪ ಈಗ ಕಳಿಸ್ತೇನೆ ಪದ್ಮನ....ಕೂತುಕೊ" ಎಂದು ಹೇಳಿ ಒಳಕ್ಕೆ ಹೋದರು. ಮುಕ್ಕಾಲು ಪಾಲು ಶೃಂಗರಿಸಿಕೊಂಡೇ ಬರ್‍ತಾಳೆ ನನ್ನ ರಾಣಿ, ನನಗೆ ಗೊತ್ತು ಎಂದು ಕಾದಿದ್ದೆ. ಒಳಗೆ ಮಾತಿನ ಶಬ್ದ ಕೇಳಿತು. "ಹೋಗು ಅವರೇನು ಮಾಡೋದಿಲ್ಲ....ನಮ್ಮವರೇ ಅವರೂ" "ಊ ಓಗ್ತಾರೆ....ಊಹೂ ನಾ ಓಗಲ್ಲ....ಅವರು ಒಡಿತಾರೆ" "ಇಲ್ಲಮ್ಮ ಜಾಣಮರಿ ಹೋಗು. ನಿನಗೆ ತಿಂಡಿ ಕೊಡ್ತೇನೆ." ಇದೇನು ಈ ಹುಡುಗಿ ಇಷ್ಟು ನಾಚುತ್ತೆ ಎಂದುಕೊಂಡೆ. ಗೋಡೆ ಮೇಲಿದ್ದ ಅವಳ ಫೋಟೋ ನೋಡಿದೆ. ಕಳ್ಳಿ ಎಂದೆ. ಇಷ್ಟರಲ್ಲಿ ಮೀನಾಕ್ಷಮ್ಮನವರು ದಪ್ಪನೆಯ, ಕಪ್ಪನೆಯ, ಮಂಕು, ಪೆದ್ದ, ಸಿಂಬಳ ಮಯ, ಮೂಗಿನ ಪ್ರಾಣಿಯೊಂದನ್ನು ಕೊಸರಿಕೊಳ್ಳುತ್ತಿದ್ದರೂ ಪ್ರಯಾಸದಿಂದ ಕೋಣೆಗೆ ನೂಕಿದರು. ಇದನ್ನು ನೋಡಿ ನಾನು ಬೆವತುಹೋದೆ.... 'ಪದ್ಮಾ' ಎಂದೆ. "ಕರಿತಾರೆ ನೋಡು ಹೋಗಪ್ಪ" ಎಂದು ಹೇಳಿ ಆ ಮೃಗವನ್ನು ಕೂಡಿಸಿ ಹೊರಟುಹೋದರು, ಆ ಪ್ರಾಣಿ ಬಿಕ್ಕಿಬಿಕ್ಕಿ ಅಳುತ್ತಿದ್ದಿತು. ನಾನು ಮಂಕಾಗಿಹೋಗಿದ್ದೆ.

"ನಿನ್ನ ಹೆಸರೇನೋ...." ಎಂದೆ.

"ಅ....ಪದ್ಮನಾಭ....ಅಮ್ಮ ಮಾತ್ರ ಪದ್ಮ, ಪದ್ದು ಅಂತಾಳೆ,' ಎಂದು ಸುರಿತು ಆ ಸಿಂಬಳ ಮೃಗ.

"ಅದ್ಯಾರದೂ ಫೋಟೋ...." ಅಂದೆ.

"ನಮ್ಮಕ್ಕನದು ಅದು....ಭಾವಂಜೊತೇಲಿ ಸಿರಾದಲ್ಲಿದಾಳೆ"

ಎಂಟು ವರುಷಕ್ಕೂ ದಂಟೂಂತ ಅನ್ನದ ಆ ನನ್ನ ಪದ್ಮನಿಗೆ ಒಳ್ಳೆ ಶುಂಠಿಕೊಂಬು ಕೊಟ್ಟು ದಬದಬಹೇರಿ ಕಿವಿ ಹಿಂಡಿ ಕಪಾಳಕ್ಕೆ ಹೊಡೆದುದು ಈವರೆಗೂ ಖಂಡೇರಾಯರಿಗೂ ಮೀನಾಕ್ಷಮ್ಮನವರಿಗೂ ಸಮಸ್ಯೆಯಾಗಿ ಹೋಗಿದೆ.



# ಜರಿಪೇಟ



ಅಪ್ಪಣ್ಣಯ್ಯಂಗಾರ್— ಬೆಂಗಳೂರಿಗೆ ಯಳಂದೂರಿನಿಂದ ಹೈಸ್ಕೂಲ್ ಸೇರಲು ಬಂದ. ಅವನಿದ್ದುದು ಗುಟ್ಟಹಳ್ಳಿಯ ಚಿಕ್ಕ ಕತ್ತಲು ಮನೆಯ ಮುಂದಿನ ಕೊಟ್ಟಿಗೆಯಂಥಾ ಧೂಳು ತುಂಬಿದ ರೂಮಿನಲ್ಲಿ. ಕಪ್ಪುಬಣ್ಣ, ಮೊಳಕಾಲಿಗೆ ಕೊಂಚ ಕೆಳಗಿನವರೆಗೆ ಉಟ್ಟಿರುವ ಅಗಲಂಚಿನ ಸೇಲಂ ಪಂಚೆ, ಮೊಣಕೈ ಬಳಿ ಹರಿದಿದ್ದರೂ ತೇಪೆ ಹಾಕಿದ್ದ ಕರಿಯ ಕ್ಲೋಸ್ ಕಾಲರ್ ಕೋಟು, ಎದ್ದು ಕಾಣುವ ಮೂರುನಾಮ, ಗಂಟುಹಾಕಿದ ಜುಟ್ಟು, ಒಂದು ಗಾಂಧಿ ಟೋಪಿ ಇದೇ ಅವನ ಚಿತ್ರ. ಮೂಗು ಕೊಂಚ ಗರುಡನ ಜಾತಿ, ಬಾಯಿ ಹನುಮನ ಜಾತಿ, ಶರೀರ ವಾಮನಾವತಾರ, ಊಟ 'ಭವತಿ ಭಿಕ್ಷಾಂದೇಹಿ.' ಪಟ್ಟಣಿಗರ ಅಲಂಕಾರಕ್ಕೆ ಕೊಂಚವೂ ಮನ ಸೋಲಲಿಲ್ಲ. ಕ್ರಾಪು ಸೂಟು ಇವುಗಳಿಗಾಗಿ ಅವನೆಂದೂ ಆಸೆಪಟ್ಟಿರಲಿಲ್ಲ. ಅವನ ರೀತಿಯೇ ಬೇರೆ. ಅವನ ನಡತೆಯೇ ಬೇರೆ. ಅಷ್ಟಾಗಿ ಶಾಲೆ ಯಲ್ಲಿ ಗಣಿತ ಒಂದನ್ನು ಬಿಟ್ಟು ಉಳಿದಿದ್ದರಲ್ಲೆಲ್ಲಾ ಕೊಂಚ ಐಬೇ. ಯಾರೊಡನೆಯೂ ಹೆಚ್ಚು ಸೇರುತ್ತಿರಲಿಲ್ಲ. ಕ್ಲಾಸಿನಲ್ಲಿ ಕೊನೇ ಬೆಂಚಿ

ನಲ್ಲಿ ಕುಳಿತಿರುತ್ತಿದ್ದ. ಚರಿತ್ರೆ ಪೀರಿಯಡ್‌ನಲ್ಲಿ ಮಾತ್ರ ಹೇಗಾದರೂ ಮಾಡಿ ಮುಂದಿನ ಬೆಂಚಿಗೆ ಬಂದು ಕುಳಿತು ಬಿಡುತ್ತಿದ್ದ. ಅದಕ್ಕೆ ಕಾರಣ ಚರಿತ್ರೆ ಮೇಷ್ಟ್ರು. ಅವರು ಎತ್ತರನೆಯ ಕೆಂಪನೆಯ ಆಸಾಮಿ. ಬಹಳ ಚಲುವರ ಜಾತಿ, ಮೇಲೆ ಅಲಂಕಾರ ಪ್ರಿಯರು. ಅವರ ಸಿಲ್ಕಿನ ಸೂಟಿಗಿಂತ ಅವರ 'ಜರೀ ಪೇಟ' ಅವರನ್ನು ಕಾಮನಂತೆ ಕಂಗೊಳಿಸುವ ಹಾಗೆ ಮಾಡುತ್ತಿತ್ತು. ನಮ್ಮ ಅಪ್ಪಣ್ಣಯ್ಯಂಗಾರಿಗೆ ಅವರು ಬಂದರೆ ಎಷ್ಟು ನೋಡಿದರೂ ಸಾಲದು. ಅದರಲ್ಲೂ ಬೆಳ್ಳಗಿನ ಜರೀಪೇಟ ಕಂಡರೆ ಕೈಮುಗಿದು ಬಿಡುವಷ್ಟು ಭಕ್ತಿ. ತಾನು ದೊಡ್ಡವನಾದ ಮೇಲೆ ಇಂಥದೇ ಜರಿಪೇಟ ಹಾಕಿಕೊಂಡು ಮೆರೆಯಬೇಕೆಂಬ ಹಂಬಲ. ಜರಿಪೇಟವೇ ಉಡುಪಿನಲ್ಲೆಲ್ಲಾ ಅತ್ಯುನ್ನತ ಸ್ಥಾನದಲ್ಲಿರುವ ವಸ್ತು. ಇದರ ಮುಂದೆ ಬೆರಿಬೆರಿ ಸೂಟು ಇಲ್ಲ; ಗ್ಯಾಬರ್ಡಿನ್ ಪ್ಯಾಂಟೂ ಇಲ್ಲ; ಅದೇ ಸರ್ವೋತ್ಕೃಷ್ಟ ಅಲಂಕಾರ. ಜರೀಪೇಟ ಇಲ್ಲದವನು ತೃಣ ಸಮಾನ ಎಂಬುದು ಅಪ್ಪಣ್ಣಯ್ಯಂಗಾರಿಯ ಸಿದ್ಧಾಂತ. ಜರೀಪೇಟಕ್ಕೆ ಮೋಹಗೊಂಡ ಅಪ್ಪಣಯ್ಯಂಗಾರಿ ಅದಕ್ಕಾಗಿ ಎಂಥಾ ತ್ಯಾಗಕ್ಕಾದರೂ ಸಿದ್ಧನಿದ್ದ. ದಿನ ಕಳೆದಂತೆ ಚರಿತ್ರೆ ಮೇಸ್ಟ್ರು ದೇವತೆಯಂತೆ ಕಾಣತೊಡಗಿದರು. ಅಪ್ಪಣ್ಣ ಅಯ್ಯಂಗಾರಿ ಅವರ ಮನೆಗೆ ಹೋಗಿ ಬರಲು ಪ್ರಾರಂಭಿಸಿದ. ಮೇಸ್ಟ್ರು ಮನೆಗೆ ಹೋದಾಗ ಕದ್ದು ಆ ಜರೀಪೇಟ ಮುಟ್ಟಿಬಂದರೆ ಅವನಿಗೆ ಒಂದು ತರಹ ತೃಪ್ತಿ. ಅಪ್ಪಣ್ಣ ತನ್ನ ರೂಮಿನಲ್ಲಿದ್ದಾಗ ತನ್ನ ಸ್ನಾನದ ಪಂಚೆಯನ್ನು ತಲೆಗೆ ಸುತ್ತಿ ಜರಿಯ ಬದಲು ಸಿಗರೇಟು ಪ್ಯಾಕಿನೊಳಗಿನ ಸುನೇರಿ ಅಂಟಿಸಿ ಕನ್ನಡಿಯಲ್ಲಿ ನೋಡಿಕೊಂಡು ಇಮ್ಮಡಿಯಾದ ತನ್ನ ಸೌಂದರ್ಯಕ್ಕೆ ಹಿರಿಹಿರಿ ಹಿಗ್ಗುತ್ತಿದ್ದ.

೧೨ ರೂಪಾಯಿ ಪರೀಕ್ಷೆಯಲ್ಲಿ ೧೨ ಸಲ ಕಟ್ಟಿದರೂ ಪಾಸಾಗುವುದಿಲ್ಲವೆಂಬುದು ಅವನಿಗೆ ಗೊತ್ತಾಗಿದ್ದು ಮೂರನೇ ಸಲ ಫೇಲಾದಾಗ. ಏನೇ ಆಗಲಿ ಜರೀಪೇಟ ಒಂದಿದ್ದರೆ ತನ್ನ ಜನ್ಮ ಸಾರ್ಥಕವಾಯಿತೆಂದು ಅವನ ಅಭಿಪ್ರಾಯ. ಬಿ.ಎ., ಎಂ.ಎ. ಮಾಡಿ ದೊಡ್ಡಪದವಿ ಪಡೆದು, ಸರಿಗೆ ಪಂಚೆಗೆ ನೆರಿಗೆಹಾಕಿ, ತೀಡಿ ಕಚ್ಚೆಹಾಕಿ, ಜರಿರುಮಾಲು ಕಟ್ಟಿಕೊಂಡು ಹೋಗುತ್ತಿದ್ದರೆ ಕಂಡವರೆಲ್ಲಾ 'ನಮಸ್ಕಾರ' ಎಂದೆನ್ನುವ ದಿನ ಒಂದು

ಬರುವುದೆಂಬ ಅವನ ಹಂಬಲ ಗಾಳಿಗೋಪುರವಾಗಿ ಹೋಯಿತು. ಇನ್ನು ಮುಂದೆ ಅವನಿಂದ ಓದುವುದು ದುಸ್ಸಾಧ್ಯವಾಯಿತು. ಏನಾದರೂ ಕೆಲಸ ಹುಡುಕಲೇ ಬೇಕಾಯಿತು. ಜರೀಪೇಟದ ಪಿಶಾಚಿ ಅವನ ಬೆನ್ನು ಬಿಟ್ಟಿರಲಿಲ್ಲ. ಕೆಲಸಕ್ಕೆ ಹೋಗುವಾಗ ಜರೀಪೇಟ ಹಾಕಿಕೊಂಡೇ ಹೋಗಬೇಕೆಂದು ಅವನು ಸಂಕಲ್ಪಿಸಿದ್ದ.

ಕೆಲಸಕ್ಕಾಗಿ ಬಹಳ ಅಲೆದ. ಒಂದೊಂದು ಆಫೀಸಿನಲ್ಲೂ ದರ್ಪದಿಂದ ಕುರ್ಚಿಮೇಲೆ ಕುಳಿತ ಜರೀಪೇಟದ ಆಸಾಮಿಗಳು ಇವನನ್ನು ನೋಡಿ ಕೆಲಸವಿಲ್ಲವೆಂದು ಹೇಳಿಬಿಡುತ್ತಿದ್ದರು. ಒಂದೊಂದು ಆಫೀಸಿನಲ್ಲಿ ಹೊರಗೆ ನಿಂತ ಆಳು ಜರೀ ಇಲ್ಲದ ಬಿಳೀ ರುಮಾಲು ಹಾಕಿದ್ದನ್ನು ಕಂಡು ಈ ಕೆಲಸವಾದರೂ ಸಿಕ್ಕರೆ ರುಮಾಲು ಹಾಕಬಹುದಲ್ಲಾ ಎಂದೆನಿಸುತ್ತಿತ್ತು ನಮ್ಮ ಅಪ್ಪಣ್ಣನಿಗೆ. ಕೆಲಸಕ್ಕಾಗಿ ಅಲೆದಲೆದು ಬೇಸತ್ತು ಬಳಲಿ ಕಡೆಗೆ ಚರಿತ್ರೆ ಮೇಸ್ಟ್ರ ಸಹಾಯದಿಂದ ಒಂದು ಕೆಲಸ ಸಿಕ್ಕಿತು. ಯಾವುದೋ ಕೆಲಸ ಸಿಕ್ಕಿತಲ್ಲಾ ಎಂಬ ಸಂತೋಷಕ್ಕಿಂತ ಈ ಕೆಲಸ ಮಾಡುವಾಗ ಜರೀಪೇಟ ಹಾಕುವ ಹಾಗಿಲ್ಲವಲ್ಲ ಎಂಬ ಚಿಂತೆ ಅವನನ್ನು ಬಹಳ ಕಾಡಿಸಿತು. ಅವನಿಗೆ ಸಿಕ್ಕಿದ್ದು ಸಿಟಿ ಬಸ್ ಸರ್ವೀಸ್ ಕಂಡಕ್ಟರ ಕೆಲಸ. ಮೊದಲೆರಡು ದಿನ ಬಹಳ ಬೇಜಾರಾಯಿತು. ಆಗಾಗ್ಗೆ ಬಸ್ಸಿನಲ್ಲಿ ಬಂದು ಕೂಡುವ ಜರೀಪೇಟದವರನ್ನು ಕಂಡರಂತೂ ಅವರನ್ನು ಕೊಂದುಬಿಡಲೇ ಎಂದೆನಿಸುತ್ತಿತ್ತು. ಮೊದಲ ತಿಂಗಳ ಸಂಬಳದಲ್ಲಿ ಹಾಗೂ ಹೀಗೂ ಮಾಡಿ ಒಂದು ಕಡ್ಡಿ ಅಂಚಿನ ಜರೀಪೇಟ ಕೊಂಡೇಬಿಟ್ಟ. ಧನ್ಯ ಅಪ್ಪಣ್ಣಯ್ಯಂಗಾರ್. ಬೆಳಗಿನಿಂದ ಸಂಜೆವರೆವಿಗೆ ಬಸ್ ಕೆಲಸ. ಸಂಜೆ ಮನೆಗೆ ಬಂದಮೇಲೆ ಜರಿಪೇಟ ಹಾಕಿಕೊಂಡು ವಾಕಿಂಗ್ ಹೋಗುತ್ತಿದ್ದ. ಜರಿಪೇಟ ಹಾಕಿಕೊಂಡ ಕೂಡಲೇ ಒಂದು ತರಹ ಜಂಬ ಬರುತ್ತಿತ್ತು. ಯಾರನ್ನು ಕಂಡರೂ ಕೀಳು ದೃಷ್ಟಿಯಿಂದ ನೋಡಬೇಕೆಂದೆನಿಸುತ್ತಿತ್ತು. ಬಡವರನ್ನು ಕಂಡರೆ ಕೊಂಚವೂ ಕರುಣೆ ಎಂಬುದು ಮೂಡುತ್ತಿರಲಿಲ್ಲ. ಯಾರಿಗೇನು ಕಡಿಮೆ ನಾನು ಎಂಬ ಭಾವನೆ ಹಿರಿದಾಗಿ ಬೆಳೆಯುತ್ತಿತ್ತು.

ಇದೆಲ್ಲಾ ಆ ಒಂದು ಜರೀಪೇಟದ ಪ್ರಭಾವ. ಅಪ್ಪಣಯ್ಯಂಗಾರಿ ಜರೀಪೇಟ ಧರಿಸಿ ಲಾಲ್‌ಬಾಗಿನಲ್ಲಿ ಹೋಗುತ್ತಿದ್ದಾಗ ಎದುರಿಗೆ ಡ್ರೈವರ್

ಹವಿಾದ್ ಖಾ೯ ಬಂದರೂ ಸಲಾಂ ಎನ್ನಲು ಮನಸ್ಸು ಬರಲಿಲ್ಲ. ಅಪ್ಪಣ್ಣ ನಿಗೆ ಡ್ರೈವಿಂಗ್ ಕಲಿಸಿ ದೊಡ್ಡವನನ್ನಾಗಿ ಮಾಡಬೇಕೆಂದಿದ್ದ ಹವಿಾದ್‌ಗೆ ಇವನ ಚರ್ಯೆ ನೋಡಿ ತಾತ್ಸಾರ ಹುಟ್ಟಿತು. ಆದರೆ ಅಪ್ಪಣ್ಣ ಅದೊಂದನ್ನೂ ಹಚ್ಚಿಕೊಳ್ಳಲಿಲ್ಲ. ದಿನದಿನಕ್ಕೆ ಜರೀಪೇಟದ ಮೇಲೆ ಆವ ನಿಗೆ ಬಹಳ ಪ್ರೇಮ ಹತ್ತಿತು ಕಡೆಗೊಂದು ದಿನ ಬಸ್ಸಿನ ಕಂಡಕ್ಟರ್ ಕೆಲಸಕ್ಕೆ ಹೋಗುವಾಗ ಜರೀಪೇಟ ಹಾಕಿಕೊಂಡೇ ಹೊರಟುಬಿಟ್ಟ. ಪೇಟ ವೊಂದಿಗೆ ಅದರ ಗುಣ ಪ್ರಭಾವವೆಲ್ಲಾ ಬಂದವು. ಅಯಂಗಾರ್‍ರು ದಿನ ದಂತೆ ಕೆಲಸಮಾಡಲಿಲ್ಲ. ಗಾಡಿಯಲ್ಲಿ ಕೂತವರ ಮೇಲೆ ಜೋರುಮಾಡಿ ಜಗಳವಾಡಿದ. ಇನ್ನೊಬ್ಬ ಜರೀಪೇಟದವರಿಂದ ಏಟು ತಿನ್ನುವ ಸಂಭವ ಬಂದಿತ್ತು. ಬಸವನಗುಡಿಯುವರನ್ನು ಮಲ್ಲೇಶ್ವರದಲ್ಲಿಳಿಸುವಂತೆ ಮಾಡಿತು ಜರೀಪೇಟ. ಡ್ರೈವರ್ ಬೈದರೆ.... ಅವನನ್ನು ಹೊಡೆಸಿಬಿಟ್ಟಿತು ಜರೀ ಪೇಟ....ಯಾರದೇನು ಹಂಗು ನಾನೇ ದೊರೆ ಎನಿಸಿತು ಜರೀಪೇಟ. ಈ ಸುದ್ದಿ ಯಜಮಾನರಿಗೆ ತಿಳಿದು ಅವರು ಅಪ್ಪಣ್ಣನಿಗೆ ಏನೋ ಹೇಳಲು ಹೋದಾಗ ಅಪ್ಪಣ್ಣ ಜರೀಪೇಟ ಹಾಕಿದ್ದರಿಂದ ಚೆನ್ನಾಗಿ ಯಜಮಾನ ರನ್ನೇ ಬೈದುಬಿಟ್ಟ....ಅಪ್ಪಣ್ಣನ ಜರೀಪೇಟ ಅವನಿಗೇ ವೈರಿಯಾಯಿತು. ಜರೀಪೇಟ ಅವನ ಕೆಲಸ ಕಳೆಯಿತು.

ಈ ಈ ಈ ಈ

ಈಗ ಅಪ್ಪಣ್ಣ ಗಾಂಧೀಟೋಪಿ ಹಾಕುತ್ತಾನೆ. ಯಾವುದೋ ಮಿಲ್ಲಿ ನಲ್ಲಿ ಏನೋ ಕೆಲಸ ಮಾಡುತ್ತಾನೆ. ಜರೀಪೇಟದವರನ್ನು ಕಂಡರೆ ಉರಿದು ಬೀಳುತ್ತಾನೆ. ಅವನ ಜರೀಪೇಟವನ್ನು ಅವನೇ ಸ್ವತಃ ಸುಟ್ಟನಂತೆ!



# ‘ಶಾಕುಂತಲಾ ವಿಮರ್ಶೆ’

ಶ್ರೀನಿ, ಭಾರತ ಭಾಗವತದ ವಿಮರ್ಶೆ ಪುಸ್ತಕ ಒಂದನ್ನ ತಯಾರಿಸಿದ್ದಾನೆ. ಅವನ ಸ್ವಭಾವವೇ ಒಂದು ತರಹ. ಹಳೇ ಪುರಾಣದಲ್ಲಿನ ನಿಜಾಂಶವನ್ನು ಹೊಸದಾಗಿ ನಿರೂಪಿಸಿದ್ದಾನೆ. ಚರಿತ್ರೆಕಾರರು ಶಾಸನ ಹುಡುಕುವ ಹಾಗೆ ಇವನು ಹಳೇ ಓಲೆಗರಿ ಭಾರತ, ರಾಮಾಯಣ ತಿರುವಿ ಹಾಕುತ್ತಿರುತ್ತಾನೆ.

ತುಂಬಿದ ಬಸುರಿ ಶಕುಂತಲೆ, ದುಷ್ಯಂತನೆದುರು ನಿಂತು ‘ ಕೈ ಹಿಡಿದು ಸಲಹೆನ್ನನು ’ ಎಂದು ಕೇಳಿದಾಗ ‘ ನೀನ್ಯಾರೋ ನಾನರಿಯೆ ’ ಅಂತ ಅಂದಿದ್ದು ಯಾತಕ್ಕೆ ಅನ್ನುವುದಕ್ಕೆ ಹೊಸ ಕಾರಣ ಅವನಿಗೆ ಸಿಕ್ಕಿದೆ. ದೂರ್ವಾಸರ ಶಾಪ ಅಷ್ಟೇನು ಪರಿಣಾಮಕಾರಿ (effective) ಆಗಿರಲಿಲ್ಲ ವೆಂದು ಅವನು ಹೇಳುತ್ತಾನೆ.

‘ ಕಮಲವದನೆ ಶಕುಂತಲಾ ’ ಸೌಂದರ್ಯದ ಖನಿ. ಅವಳ ಚಲುವನ್ನು ಬಣ್ಣಿಸಬೇಕಾದರೆ ಕಾಳಿದಾಸನೇ ಸರಿ. ಆ ಚಲುವೆಯ ಮುಖ ಆಗತಾನೆ ಅರಳಿದ ಕಮಲದಂತಿತ್ತಂತೆ. ಅಂತೇ ಭ್ರಮರಗಳು ಕಮಲ ವೆಂದು ಭಾವಿಸಿ ಅವಳ ಮುಖಕ್ಕೆ ಮುತ್ತುತ್ತಿದ್ದುವಂತೆ. ಒಂದು ಮುಂಜಾನೆ ಹೀಗೆ ಶಕುಂತಲೆ ಉದ್ಯಾನದಲ್ಲಿ ಹಾಯಾಗಿ ಅಡ್ಡಾಡುತ್ತಿದ್ದಾಗ ಬಂತು ಒಂದು ಭ್ರಮರದ ತಂಡ. ಮೊದಲೇ ಸುಂದರಿ, ಮೇಲೆ ಗರ್ಭಿಣಿ, ಕೇಳಬೇಕೆ ಅವಳ ಸೌಂದರ್ಯದ ಸೊಗಸ? ಅವಳ ಮುಖ ಒಳ್ಳೇ ಕಮಲ

ದಂತೆ ಕಂಡಿತು ಆ ತಂಡಕ್ಕೆ. ಆ ಕಮಲದಲ್ಲಿನ ಸುಧೆಯನ್ನು ಹೀರಬೇಕೆಂದು ಮುತ್ತಿದುವು ಅವಳ ಮುಖಕ್ಕೆ. ಪಾಪ ಆಕೆಯೇನು ಮಾಡುತ್ತಾಳೆ— ಓಡಿಸಿದಳು. ಅವು ಹೋಗಲಿಲ್ಲ. ಗಟ್ಟಿಯಾಗಿ ಚೀರಿದಳು—ಬಳಿಯ ಲತಾಕುಂಜದ ಮರೆಯಲ್ಲಿ ಹೂ ಕೊಯ್ಯುತ್ತಿದ್ದ ಸಖಿಯರು ಬಂದರು— ಹಾಗೂ ಹೀಗೂ ಮಾಡಿ ಆ ಭ್ರಮರ ತಂಡವನ್ನು ಓಡಿಸಿದರು.

ಆದರೂ ಆ ಸುಂದರ ಮುಖಕಮಲದ ಸಾರವನ್ನು ಒಂದೆರಡು ಭ್ರಮರಗಳು ಹೀರೇಬಿಟ್ಟುವು. ಮೊದಲೇ ಕೋಮಲ ಶರೀರ, ಮೇಲೆ ಭ್ರಮರದ ಕಡಿತ—ಸರಿ, ಮುಖ ಮರುದಿನದ ಹೊತ್ತಿಗೆ ಬಾತು ವಿಕಾರ ವಾಗಿ ಕಾಣಿಸತೊಡಗಿತು, ಅದರ ಮರುದಿನವೇ ಪ್ರಯಾಣಕ್ಕೆ ಶುಭ ಮುಹೂರ್ತವೆಂದು ಕಣ್ವ ಋಷಿಗಳು ಪಂಚಾಂಗ ನೋಡಿಟ್ಟಿದ್ದರು. ಆಶ್ರಮದ ಜಿಂಕೆ, ಮರ, ಲತೆ, ಹೂಗಳನ್ನು ಬಿಡಲಾರದೆ ಕಣ್ಣೀರಿಟ್ಟು ಹೊರಟಳು. ಆ ದುಃಖಕ್ಕೀಡಾಗಿ ಕಣ್ಣುಗಳೂ ಕೊಂಚ ಬಾತುಕೊಂಡಿದ್ದವು. ಅಂಥ ಚಲುವೆ ಶಕುಂತಲೆ ಗುರ್ತು ಸಿಗದಂತೆ ಆಗಿಹೋದಳು. ಅದಕ್ಕೇ ದುಷ್ಯಂತ ಇವಳನ್ನು ನೋಡಿ 'ನೀನ್ಯಾರೊ ನನಗೆ ಗೊತ್ತಿಲ್ಲ— ಸುಮ್ಮನೆ ಹೇಳಿ ನನ್ನ ಮಾನ ತೆಗೆಯಬೇಡ. ಹೋಗಾಚೆ' ಎಂದು ಹೇಳಿದನಂತೆ.

ಇನ್ನೆರಡು ದಿನ ತಡೆದು—ಔಷಧಿ ಹಾಕಿಸಿಕೊಂಡು ಬಾವು ಇಳಿದ ಮೇಲೆ ಹೋಗಿದ್ದರೆ—ಮೇನಕೆ ಬಂದು ದೇವಲೋಕಕ್ಕೆ ಕರೆದೊಯ್ಯುವ ಭಾರ ತಪ್ಪುತ್ತಿತ್ತು. ಕಾಳಿದಾಸನಿಗೆ ಅರ್ಥ ಕಥೆ ಬರೆಯೋದು ಉಳಿಯುತ್ತಿತ್ತು. ಪಂಡಿತರಿಗೆ ಆ ಅರ್ಥದ ಅರ್ಥ ತಿಳಿಯದೆ ವಿಪರೀತಾರ್ಥ, ಅಪಾರ್ಥ ಮಾಡುವ ಅನರ್ಥ ಕಳೆಯುತ್ತಿತ್ತು. ಎಲ್ಲದಕ್ಕೂ ಮುಖ್ಯ ಮುಂದಾಲೋಚನೆ ಬೇಕು.

ಇದು ಶೀನಿ ಬರೆದಿಟ್ಟಿರುವ 'ಶಾಕುಂತಲಾ' ಕಥೆಯ ವಿಮರ್ಶೆಯ ಒಂದು ಪುಟ.



# ವೀರಾಸಾಮಿ ಕನಸು

ವೀರಾಸಾಮಿ ಆಶಾವಾದಿ. ಅಂತೋಣಿ ವರ್ಕ್‌ಷಾಪಿನಲ್ಲಿ ಫಿಟ್ಟರ್ ಕೆಲಸವಾದರೂ ಭಾನುವಾರ ಮಲ್ ಪಂಚೆ, ನೀಲಿ ಷರಟು ಹಾಕುತ್ತಿದ್ದ. ಗ್ರೇ ಪ್ಯಾಂಟು, ನೀಲಿ ಉಲನ್ ಕೋಟು ಹಾಕಿಕೊಂಡ್ರು ಫೋಟೋ ತೆಗೆಸಬೇಕು. ಅದನ್ನ ಅಲಸೂರಿನ ಮುನಿಯಮ್ಮನಿಗೆ ತೋರಿಸಬೇಕು. ಮುನಿಯಮ್ಮ ಅದನ್ನ ತನ್ನ ಮಗಳು ನಂಜಿಗೆ ತೋರಿಸಿ ಮುಂದಿನ ಲಗ್ನ ಮಾಸದಲ್ಲಿ ತಾಳಿ ಕಟ್ಟಿಸೋ ಏರ್ಪಾಡಾಗಬೇಕು ಎಂದು ಅವನ ಆಶೆ. ಆ ನಂಜಿ ಮನೆಗೆ ಬಂದ ಮೇಲೆ ತನ್ನ ಸಂಸಾರ ಹೂವಿನ ಹಾಸಿಗೆ ಆಗಬೇಕಾದರೆ ಹಣ ಬೇಕು. ಹೇಗಿದ್ದರೂ ಫಿಟ್ಟರ್ ಕೆಲಸ ಗೊತ್ತಿದೆ. ಒಂದು ಲೇತು (Lathe) ಡ್ರಿಲಿಂಗ್ ಮಿಷನ್ನು ಇಟ್ಟುಕೊಂಡು ಸ್ವಂತ ಕೆಲಸ ಮಾಡಿದರೆ ರಾಜ ಇದ್ದಂತೆ ಇರಬಹುದು. ಇದಕ್ಕೆ ಹಣ ಎಲ್ಲಿಂದ ತರೋದು ? ಮನಸ್ಸಿನ ಮಂಡಿಗೆ ಬಹಳ ರುಚಿ. ಗಾಳಿಗೋಪುರ ಬಹಳ ಎತ್ತರ. ಸಧ್ಯ ಮಾಲೀಕ ಸರಿಯಾಗಿ ಕೂಲಿಕೊಟ್ಟರೆ ಸಾಕಾಗಿದೆ. ಇನ್ನು ಇಷ್ಟೆಲ್ಲಾ ಯೋಚಿಸಿ ಪ್ರಯೋಜನವೇನು ? ಎಂದಂದುಕೊಳ್ಳುತ್ತಿದ್ದ.

ದಿನದಿನಕ್ಕೆ ಅವನ ಆಸೆ ಮುಗಿಲು ಮುಟ್ಟತೊಡಗಿತು. ಆ ಹಣ

ಹೇಗೆ ಸಿಗಬೇಕು ? ದುಡ್ಡು ಎಲ್ಲರಿಗೂ ಬೇಕು. ವೀರಾಸಾಮಿಗೆ ಬೇಕೇ ಬೇಕು ; ನಂಜಿ ಮನೆಗೆ ಬರಬೇಕಾದರೆ ಖಂಡಿತ ಬೇಕು.

ಅದೇ ಯೋಚನೆಯಲ್ಲಿ ಮಲಗಿದ್ದ – ಇನ್ನೂ ಸಂಬಳ ಬಂದಿರಲಿಲ್ಲ. ಬೀಡಿ ಅಂಗಡಿ ರಾಮುಸಾಮಿ ಹಳೇ ಬಾಕಿ ಕೊಡಲಿಲ್ಲವೆಂದು ನಡುರಸ್ತೆಯಲ್ಲಿ ಅವಮಾನ ಮಾಡಿದ್ದು ಭಾವಿ ಅತ್ತೆ ಮುನಿಯಮ್ಮನಿಗೆ ತಿಳಿದದ್ದು – ಎಲ್ಲಾ ಅವನ ತಲೆಯಲ್ಲಿ ಕಟೆಯುತ್ತಿತ್ತು....ಹಾಗೇ ನಿದ್ರೆಹತ್ತಿತು....ಕೊಂಚ ಹೊತ್ತಿನ ನಂತರ ಸವಿಗನಸೊಂದ ಕಂಡ........

"ವೀರಾಸಾಮಿ ಪರಾತ್ಪರ ಸ್ವರೂಪವನ್ನು ಕುರಿತು ತಪಸ್ಸಿಗೆ ಕೂತಿದ್ದಂತೆ. ಇವನ ಭಕ್ತಿಗೆ ಮೆಚ್ಚಿ ಪರಮಾತ್ಮ ಲಕ್ಷ್ಮೀ ಸಮೇತನಾಗಿ ಇವನ ಮುಂದೆ ನಿಂತಿದ್ದಾನೆ. ವೀರಸಾಮಿಗೆ ಹಿಡಿಯಲಾರದ ಹಿಗ್ಗು. ಇನ್ನೇನು ಪರಮಾತ್ಮನ ಕೃಪೆಯಿಂದ ಅನಂತೈಶ್ವರ್ಯದಲ್ಲಿ ಮುಳುಗಿ ತೇಲಾಡಬಹುದೆಂದು ಹಿರಿಹಿರಿ ಹಿಗ್ಗಿದ. ನಗುನಗುತ್ತ ಪರಮಾತ್ಮ 'ಎಲೈ! ವೀರಾಸಾಮಿ, ನಿನ್ನ ಭಕ್ತಿಗೆ ಮೆಚ್ಚಿದೆ-ಹಿಡೀ ಈ ಗಂಟನ್ನ' ಎಂದ. ವೀರಾಸಾಮಿ ನಮ್ರತೆಯಿಂದ ವಂದಿಸಿ ಗಂಟು ತೆಗೆದುಕೊಂಡು ಬಿಚ್ಚಿದ – ಒಂದೇ ಒಂದು ಹತ್ತುರೂಪಾಯಿ ನೋಟಿತ್ತು. 'ದೇವಾದಿದೇವ, ಲಕ್ಷ್ಮೀ ಜೊತೆಗೆ ಬಂದೂ ಇಷ್ಟೇನೆ ನಿನ್ನ ಯೋಗ್ತೆ. ಒಂದಿಪ್ಪತ್ತು ಸಾವಿರ ರೂಪಾಯಿ ಕೊಡು. ನಿನ್ನ ಗಂಟೇನು ಹೋಗುತ್ತೆ' ಎಂದು ವೀರಾಸಾಮಿ ಆ ಗಂಟನ್ನು ಮತ್ತೆ ಅವನ ಮೇಲೆ ಎಸೆದ."

ಕನಸು ಮುಗಿಯಿತು. ವೀರಾಸಾಮಿ ಅದೇ ಹರಕಲು ಜಂಖಾನೆ ಮೇಲೆ ಮಲಗಿದ್ದ. ಕತ್ತಲು. ನಿಶ್ಶಬ್ದ. 'ಅಯ್ಯೋ' ಎಂದ. ಮತ್ತೆ ಬೇಗ ಗಟ್ಟಿಯಾಗಿ ಕಣ್ಣುಮುಚ್ಚಿಕೊಂಡು, 'ಅಯ್ಯಾ ದೇವರೆ – ಹೋಗಲಿ. ಅದೇ ಹತ್ತು ರೂಪಾಯಿ ಕೊಡಯ್ಯ ಸಾಕು....' ಎಂದು ಕೂಗಿದ.

ಅಂತೋಣಿ ವರ್ಕ್‌ಷಾಪಿನ ಸೀಟಿಯೂ ಕೂಗಿತು.



# ಕಾಷ್ಟ ವ್ಯಸನ



‘ಮೊದಲೆ ಮಾಸ್ತರು ಮೇಣ್ ಪತ್ತು ಮತ್ತೆರಡು ಪಸುಳೆಗಳ್’ ಎಂದು ಸಾರಿದ ಕವಿ ನಮ್ಮ ಗುರುಗಳು ಸುಬ್ಬಣ್ಣನವರನ್ನು ನೋಡೇ ಬರೆದಿರಬೇಕು. ಈ ಯುದ್ಧ ಅವರ ಮೇಲೆ ಮಾಡಿದಷ್ಟು ಧಾಳಿ ಯಾರ ಮೇಲೂ ಮಾಡಿರಲಿಕ್ಕಿಲ್ಲ. ಮಾಸ್ತರೇನೋ, ‘ಸಾವಿರಾರು ಜನ ದಫ್ತರ್ ಬಂದಿಗಳೂ ನೂರಾರು ಮಂದಿ ಇಂದಾ-ಗೇ ಗುಮಾಸ್ತರೂ ಈ ಸಮರಧಾಳಿಗೀಡಾಗಿರೋವಾಗ ನನ್ನದೇನಯ್ಯಾ’ ಎಂದುಬಿಡುತ್ತಿದ್ದರು. ಮೇಲು ಮೇಲಕ್ಕೆ ಹೀಗೆ ಹೇಳುತ್ತಿದ್ದರೂ, ಆ ಸುದಾಮನಿಗೆ ಸಂಸಾರ ಸಾಗಿಸುವುದರಲ್ಲಿ, ಕಪಾಳಕ್ಕೆ ಬಂದ ನೀರನ್ನು ಮತ್ತೆ ಕಣ್ಣಗೇರಿಸಿದಷ್ಟು ಕಷ್ಟವಾಗುತ್ತಿತ್ತು.

ಸುಸೂತ್ರವಾಗಿ ಸಂಸಾರ ಸರಿತೂಗಿಸೋ ವಿಧಾನ ಸಾಮವೇದದಲ್ಲೂ ಹೇಳಿಲ್ಲ. ಸುಬ್ಬಣ್ಣನವರಿಗೆ ಕಟ್ಟಿಗೆಯ ಸಮಸ್ಯೆ ಬಹು ಕಠಿಣವಾಯಿತು. ಕಾಷ್ಟವ್ಯಸನ ಪರಿಹಾರಕ್ಕೆ ಎಂತಹ ಘಟಾನುಘಟಿಗಳೇ ಲಾಗ ಹೊಡೆಯುತ್ತಿರುವಾಗ, ಸುಬ್ಬಣ್ಣನವರ ಗತಿ ಏನು? ಏನು ಬಿಟ್ಟರೂ, ಹಿಟ್ಟು ಬೇಯಿಸುವುದನ್ನು ತ್ಯಜಿಸುವುದಕ್ಕಾಗುತ್ತದೆಯೇ? ಕಟ್ಟಿಗೆ ಮಂಡಿಯವನ ತಲೆಯನ್ನು ಎಷ್ಟು ದಿನ ಸವರುವುದು? ಕಡೆ ಕಡೆಗೆ ಬಲು ತಾಪತ್ರಯಕ್ಕಿಟ್ಟು

ಕೊಂಡಿತು. ಜಪ್ಪಯ್ಯ ಅಂದರೂ ಊಹುಂ. ಮನೆಯಲ್ಲಿ ಬೇಳೆ ಬೇಯುವುದು ಕಷ್ಟವಾಯಿತು.

ಮೊದಲೆರಡು ದಿನ ಹಿತ್ತಲ ಬೇಲಿ ಬಿದಿರು, ಹಳೆಯ ಜಾಕಾಯಿ ಪೆಟ್ಟಿಗೆ– ಒಲೆಗೆ ಆಹುತಿಯಾದುವು. ಮೂರನೆಯ ದಿನ ಮಾವನ ಮನೆ ಯಿಂದ ತಮ್ಮ ಅರ್ಧಾಂಗಿ ತಂದ ಹಾರ್ಮೋನಿಯಮ್ಮಿನ ನೆನಪಾಯಿತು. 'ಕಡೆಯ ಬಾರಿ ಲಂಬೋದರ ನುಡಿಸಿಬಿಡೆ' ಎಂದರು. 'ಪರಮಾತ್ಮ ಹರೆ!' ಎಂದು ಮಾಸ್ತರು ಕೊಟ್ಟೂರಪ್ಪನವರನ್ನು ನೆನೆದು ಮುಚ್ಚು ಬೀಸಿ ಹಾರ್ಮೋನಿಯಮ್ಮನ್ನು ಹರಹರ ಎನಿಸಿಬಿಟ್ಟರು. ಅವತ್ತಿನ ದಿನ ಹುಡು ಗರಿಗೆಲ್ಲ ಲಂಬೋದರ! ಮರುದಿನ ಹಿತ್ತಲಗಿಡ ಮದ್ದಲ್ಲ ಎನ್ನುತ್ತ ಕಿತ್ತಳೆ ಗಿಡದ ರೆಂಬೆಗೆ ಕೊಡಲಿ ತಗುಲಿಸಿದರು!

ಹಾರ್ಮೋನಿಯಂ ಮರಣದಿಂದ ಮನೆಯಲ್ಲಿ ಶಾಂತಿ ನೆಲೆಸಿದಾಗ ಮಾಸ್ತರ ಮೆದುಳಿಗೆ ಚುರುಕೇರಿತು. ಬೆಳಗಿನ ಜಾವವೇ ಒಂದು ದಾರಿ ಹೊಳೆಯಿತು. ತಮ್ಮ ಹುಡುಗರನ್ನೆಲ್ಲ ಎಬ್ಬಿಸಿದರು; ಪಾಠದ ಹುಡುಗ ರನ್ನೂ ವೆಂಕನ ಮೂಲಕ ಕರೆಸಿದರು. ಕುವರರ ಕಿವಿಯಲ್ಲಿ ಏನೋ ಒಂದು ಮಂತ್ರೋಪದೇಶಮಾಡಿ, 'ಬೇಗ ಮಡಿ ಉಟ್ಟುಕೊ! ದಂಡಿಯಾಗಿ ಕಟ್ಟಿಗೆ ತರುತ್ತೇನೆ' ಎಂದು ಆಕೆಗೆ ಅಭಯಕೊಟ್ಟರು.

ಸರ್ಕಾರಿ ಡಿಪೋವಿಗೆ ಆ ಬೆಳಗ್ಗೆ ಒಳ್ಳೆ ಸರ್ವೆ ಸೌದೆ ಒಂದು ಲಾರಿ ಭರ್ತಿ ಬಂದಿತ್ತು. ಆಗಲೇ ವಿಪರೀತ ಜನ ಹಿಟ್ಟಿನ ಚೀಟಿ ಸಹಿತ ತಾಮುಂದು ನಾಮುಂದು ಎಂದು ನುಗ್ಗ ಹತ್ತಿದರು. ಇದ್ದಕ್ಕಿದ್ದ ಹಾಗೆ, ಹುಡುಗರ ತಂಡವೊಂದನ್ನು ಹೆದರಿಸಿ ಅಟ್ಟಿಸಿಕೊಂಡು ಮಾಸ್ತರು ಆ ಚೌಕಕ್ಕೆ ಬಂದರು. 'ಮುಟ್ಠಾಳ! ತೊಲಗು' ಎಂದು ಮಾಸ್ತರು ವೆಂಕನ ಮೇಲೆ ಬಿದ್ದರು. 'ಕಳ್ಳ, ಅನ್ಯಾಯ. ಕೊಂದುಹಾಕಿಬಿಡುತ್ತೇನೆ' ಎಂಬ ಕೂಗು ಕೇಳಿ, ಡಿಪೊ ಬಳಿ ಇದ್ದ ಗೃಹಸ್ಥರು, 'ಏನು? ಏಕೆ?' ಎಂದು ವಿಚಾರಿಸಿದರು. 'ಬಿಡಿ! ಇವರನ್ನೆಲ್ಲ ಇವತ್ತೇ ಬಲಿಹಾಕಿಬಿಡುತ್ತೇನೆ. ಶನಿ! ಪೀಡೆ ಕಳೆದುಹೋಗಲಿ' ಎಂದು ಮಾಸ್ತರು ಕೆಂಗಣ್ಣು ಬೀರಿದರು.

ಅಷ್ಟು ಹೊತ್ತಿಗೆ, ಹುಡುಗರಲ್ಲೇ ಹಾಹಾಕಾರವೆದ್ದಿತು. ಒಬ್ಬರಿ ಗೊಬ್ಬರು ಹೊಡೆದಾಟ. ವೆಂಕ ನಾಣಿಯ ಮೇಲೆ ತಿರುಗಿಬಿದ್ದು, 'ಒದೀ

ತೇನೆ, ನೋಡು' ಎಂದು ರೇಗಿದ. ಸರ್ವೆರಾಶಿಯಲ್ಲಿ ಒಂದನ್ನು ಕೈಗೆ ಹಿಡಿದು, 'ಬಿಡೋ ಕೈ' ಎಂದು ನಾಣಿ ಅದನ್ನು ಚಕ್ರಾಕಾರವಾಗಿ ಬೀಸಿದ. ನಾಣಿಯ ಸಹಾಯಕ್ಕೆ ನಾಲ್ಕೈದು ಹುಡುಗರು ಕಟ್ಟಿಗೆಗಳನ್ನು ಹಿಡಿದು ಬಂದರು. ವೆಂಕನ ಪಾರ್ಟಿಯೂ ಬಲವಾಯಿತು. ಆ ರಂಪದ ನಡುವೆ ಜನಸಮೂಹ ಸ್ತಬ್ಧವಾಗಿ ನಿಂತಿತ್ತು. 'ಹೊಡೆದಾಡಬೇಡಿರೋ! ಮಾಸ್ತರೇ! ನಿಮ್ಮ ಹೈಕಳ ಜಗಳಾನ ಹೈರೋಡಿಗೇಕೆ ತಂದಿರಿ?' ಎಂದೆನ್ನುತ್ತಿರುವಾಗಲೇ, ಯಾರೋ ಒಬ್ಬ ಮತ್ತೊಬ್ಬನಿಗೆ ಬಲವಾಗಿ ಒಂದು ಬಿಟ್ಟ. ಅವನು ಅಯ್ಯೋ ಎಂದು ಕಿರಿಚುತ್ತ ಓಡಿದ. ಸರಿ! ಹಿಡಿ, ಹೊಡಿ, ಎಂದು ಕೂಗಾಡುತ್ತ ವಿಠಲನೂ ಕೇಶುವೂ ಕಂಬಿಕಿತ್ತರು. ಸುಬ್ಬಣ್ಣನವರೂ ತೂಕವಾದ ಒಂದು ಕೊರಡು ಸಹಿತ ಹುಡುಗರನ್ನು ಅಟ್ಟಿಸಿಕೊಂಡು ಓಡಿದರು. 'ಸಮಾಧಾನ ತೆಗಿದುಕೊಳ್ಳಿ, ಮಾಸ್ತರೇ!' ಎಂದು ಡಿಪೊ ಗುಮಾಸ್ತನೂ ಅರಚಿದ. ಆದರೆ, ಅವರೆಲ್ಲ ತಮ್ಮ ಜಗಳದಲ್ಲೇ ತಲ್ಲೀನರಾಗಿದ್ದರು. ಡಿಪೊ ಜನಗಳು, ಕೊಂಚ ಹೊತ್ತು, ಗಲಾಟೆಯನ್ನೇ ನೋಡುತ್ತ ನಿಂತರು. ಮಾಸ್ತರೂ ಹುಡುಗರೂ ಕಣ್ಮರೆಯಾದಮೇಲೆ, 'ಪಾಪ! ಈ ಮಾಸ್ತರಿಗೆ ತುಂಬ ಕೋಪ....ಯಾರನ್ನಾದರೂ ಹಿಡಿದು ಚಚ್ಚಿರುತ್ತಾರೆ, ಇಷ್ಟು ಹೊತ್ತಿಗೆ' ಎಂದು ಮರುಗಿದರು.

ಹಿತ್ತಲ ಬಾಗಿಲಿಂದ ಹುಡುಗರು ಸುಬ್ಬಣ್ಣನವರ ಮನೆಗೆ ನುಗ್ಗಿ ಕಟ್ಟಿಗೆಗಳನ್ನೆಲ್ಲ ಗುಡ್ಡೆಹಾಕಿದರು. ಆಯಾಸ ಪರಿಹಾರ ಮಾಡಿಕೊಂಡರು. ಅವತ್ತು ಎಲ್ಲರಿಗೂ ರಜಕೊಟ್ಟರು, ಮಾಸ್ತರು.

ಎಂಟು ಮಣಕ್ಕೆ ಕಡಮೆ ಇಲ್ಲ–ಎಂದು ವಿಠಲ ಅಂದಾಜು ಮಾಡಿದ.



# ಗುಣಕಾರಿ ಚೂರ್ಣ



ಮೆಕ್ಯಾನಿಕ್ ಅಪ್ಪಯ್ಯನ ಅಹಂಭಾವ ಎಲ್ಲೆ ಮೀರಿತ್ತು. ಒಳ್ಳೆ ಕೆಲಸಗಾರನಾದ ಮಾತ್ರಕ್ಕೆ ಎಲ್ಲರನ್ನೂ ಗೇಲಿಮಾಡಬೇಕೆ? ಅವನ ಸ್ವಯಂ ಶ್ರೇಷ್ಠತ್ವ ಗಗನಕ್ಕೇರಿತು. ಯಾರು ಏನು ಮಾಡಿದರೂ ಅವನದು ಕೀಳುದೃಷ್ಟಿಯೇ. ಎತ್ತರವಾದ ಆಳು, ನೀಲಿ ಷರಾಯಿ, ಕಾಕಿ ಷರಟು, ಪಠಾಣ್ ಚಪ್ಪಲಿ, ಮಧ್ಯೆ ದಪ್ಪ ತುದಿಯಲ್ಲಿ ಚೂಪನೆಯ ಮೀಸೆ; ಅಣ್ಣಾತೆ ಕ್ರಾಪು. ಇವನ ಪೇಟೇಂಟ್ ಉಡುಪು ಇಷ್ಟೇ. ಆದರೂ ಇತರರು ಗ್ಯಾಬರ್‌ಡಿನ್ ಕೋಟು, ಬೆರಿ ಬೆರಿ ಪ್ಯಾಂಟು ಹಾಕಿಕೊಂಡರೂ ಇವನು ಅವರನ್ನು ಹಾಸ್ಯಮಾಡಲೇ ಬೇಕು. ಬಹಳ ಘಾಟಿ ಮನುಷ್ಯ. ಒಂದಕ್ಕೂ ಸಿಕ್ಕಿಬೀಳದೆ ನುಸುಳಿಕೊಂಡು ಹೋಗುತ್ತಿದ್ದ.

ಆ ಪ್ರಾಣಿಗೆ ಯಾರನ್ನ ಯಾವಾಗ ಸತಾಯಿಸಬೇಕು, ಯಾವಾಗ ಕೂಡದು ಎನ್ನುವುದೂ ಗೊತ್ತಾಗುತ್ತಿರಲಿಲ್ಲ. ವರ್ಷವೆಲ್ಲಾ ಒಂದೇ ಮಂತ್ರ. ಒಂದಲ್ಲ ಒಂದು ದಿನ ಒಂದಲ್ಲ ಒಂದರಲ್ಲಿ ಅವನನ್ನ ಸಿಗಿಸಿ ಸತಾಯಿಸಿ, ಕಣ್ಣಲ್ಲಿ ನೀರಿಳಿಸಿ, ಕಣ್ಣು ಬಿಡಿಸಿ ಒಬ್ಬರ ತಂಟೆಗೆ ಇನ್ನೊಮ್ಮೆ

ಬರದಂತೆ ಮಾಡಬೇಕೆಂದು ಶಂಕರಪ್ಪನ ಸಂಕಲ್ಪ. ಒಂದು ಸಲ ಶಂಕರಪ್ಪ ಹತ್ತು ರೂಪಾಯಿ ಇಡೀ ನೋಟು ಕಳೆದುಕೊಂಡು ಒದ್ದಾಡುತ್ತಿದ್ದಾಗ 'ಗಂಭೀರವಾಗಿರು ಶಂಕ್ರು, ಹಣ ಹೋದರೆ ಪಿತ್ತವಾಗೋದಿಲ್ಲ ಶರೀರಕ್ಕೆ, ತಂಪು' ಎಂದು ಹೊಟ್ಟೆಯುರಿಸಿದ್ದ. ರಾಮು ಹೊಸ ಸೂಟು ಹಾಕಿದಾಗ 'ಸಿಟಿ ಗುಜರಿ ಅಲ್ಲ, ಕಂಟೋನ್ಮೆಂಟ್ ಗುಜರಿ........ಆದರೂ ಪುರುಸೊತ್ತು ಮಾಡ್ಕೊಂಡು ಆರಿಸಿದ್ದರೆ....ಇನ್ನೂ ಚಲೋದು ಸಿಕ್ತಿತ್ತು' ಎಂದು ಹಂಗಿಸಿದ್ದ. ನಾನು ಕೂಡ ಸಮಯ ಕಾದು ಅವನ ಮೀಸೆ ಕತ್ತರಿಸಲು ಕಾದಿದ್ದೆ. ನನಗೆ ವಿಪರೀತ ತಲೆನೋವು ಬಂದಿತ್ತು....ಏನು ಮಾಡಿದರೂ ಹೋಗಲಿಲ್ಲ. ಅವನು 'ಇದಕ್ಯಾಕೆ ಒದ್ದಾಡ್ತೀಯೋ ಬಿಸಿ ನೀರು ಮೂಸಿನೋಡಿ, ಪಂಚಾಕ್ಷರಿ ಜಪ ಮಾಡು, ನೋವು ಹೋಗುತ್ತೆ' ಎಂದು ಹೇಳಿ ಸುಸ್ತುಹೊಡೆಸಿದ್ದ.

ಸೊಸೆಗೂ ಒಂದು ಕಾಲ ಬಂದೇ ಬಿಡ್ತು. ಅಪ್ಪಯ್ಯನಿಗೆ ಎಲ್ಲೂ ಇಲ್ಲದ ಹಲ್ಲುಶೂಲೆ ಬಂತು. ಪ್ರಾಣಿ ವಿಲವಿಲನೆ ವದ್ದಾಡಿ ಬಿಟ್ಟ. ಬಲವಾಗಿ ಗದ್ದಕ್ಕೆ ವಸ್ತ್ರ ಬಿಗಿದು ಸೊಟ್ಟ ವಿಕಾರ ಮುಖಮಾಡಿ ನರಳುತ್ತಾ ಮೂಲೆ ಹಿಡಿದ. ನಮಗೆಲ್ಲಾ ಸಂಕಟಪಡಿಸಿದ ಜೀವ ಸಂಕಟಪಡುತ್ತಿತ್ತು. 'ಸಿಕ್ಕಿದೆಯಾ ಎಲೆ ಜೀವ, ನಿನ್ನ ಕುಕ್ಕಿ ಕೊಲ್ಲದೆ ಬಿಡೆನು' ಎಂದು ಹಾಡಿದೆ. ಅವನ ಬಳಿ ಹೋದೆ. 'ಬಹಳ ನೋವೆ' ಎಂದೆ. 'ಹೂ ಕಣೋ........ ಗ್ರಹಚಾರ' ಎಂದ. ನಾನು ಹೇಳಿದ ಹಾಗೆ ಮಾಡಿದರೆ ಹೋಗುತ್ತದೆಂದು ಬಣ್ಣ ಕಟ್ಟಿ ಕತೆಯೊಂದು ಹೇಳಿ, ನನ್ನ ಔಷಧಿಗೆ ಒಪ್ಪಿಸಿದೆ. 'ಏನು ಮಾಡಿದರೂ ಪರವಾಗಿಲ್ಲ. ಹಲ್ಲು ಶೂಲೆ ಹೋದರೆ ಸಾಕು' ಎಂದ. ಪ್ರಚಂಡ ಪ್ರಾಣಿ ಬಾಲ ಮುದುರಿ ಮೂಲೆಗೆ ಕೂತಂತೆ ಇತ್ತು!

ಡಿಸೆಂಬರ್, ಬೆಳಗಿನ ಜಾವ ೬ ಘಂಟೆ ಮುಸುಗು ತೆಗೆಯಲು ಸಾವಿರ ರೂಪಾಯಿ ಕೊಟ್ಟರೂ ಯೋಚಿಸತಕ್ಕ ವಿಷಯ. ನನ್ನ ಗುಣಕಾರಿ ಚೂರ್ಣ ಅಪ್ಪಯ್ಯನ ಹಲ್ಲುಶೂಲೆ ಓಡಿಸಬೇಕಾದರೆ ಇದೇ ತಕ್ಕ ಸಮಯ. ಅವನ ಹಲ್ಲು ಶೂಲೆ ಮುಗಿಲು ಮುಟ್ಟಿತು. ನಡುಗುತ್ತ ಜಗಲಿಯಮುಚ್ಚಿನ ಮೇಲೆ ಕರೆದೊಯ್ದೆ. ನಾನೇನೋ-ಸ್ವೆಟರ್ ಶಾಲು ಮಫ್ಲರ್ ಎಲ್ಲಾ ಬಿಗಿದು ಛಳಿಗೆ ವೈಗೊಟ್ಟೆ. ಆದರೆ ಅಪ್ಪಯ್ಯ ಬರೀ ಒಂದು ನೆಟ್

ಬನೀನ್, ಒಂದು ನಿಕ್ಕರ್ ಮೇಲೆ ಇದ್ದ–ನನ್ನ ಔಷಧಿಗೆ ಹಾಗೇ ಇರ ಬೇಕೆಂದು ಹೇಳಿದೆ.

'ಪೂರ್ವದ ಕಡೆ ತಿರುಗಿ ಕುಳಿತುಕೋಪ್ಪ' ಎಂದೆ; ನಡುಗುತ್ತ ಕುಳಿತ. ಪಕ್ಕದಲ್ಲಿ ಹಿಂದಿನ ರಾತ್ರಿ ಹಸಿಮಡಿಕೆಯಲ್ಲಿಟ್ಟ ನೀರು ಕೊರೆ ಯುತ್ತ–ಮಂಜು ಗಡ್ಡೆಗಿಂತ ತಣ್ಣಗಿರುವಂತೆ ತೋರಿತು. ಈ ನೀರು ಔಷಧಿಗೆ ಬೇಕು. ಬಾಯಿ ತೆಗೆಸಿ ನೋಡಿದೆ. ಆ ಹಲ್ಲು, ನೋವಿನ ತಾಪಕ್ಕೆ ಗಡಗಡನೆ ನಡುಗುತ್ತಿತ್ತು. ಅವನ ಮುಖದಲ್ಲಿ ಕೊಂಚ ಕಳೆ ಯೇರಿತ್ತು. ಕೊಂಚ ಹೊತ್ತಿನಲ್ಲೇ ನರಕಯಾತನೆಯಿಂದ ಸಗ್ಗ ಸುಖ ದೇರಿಕೆಗೆ ಏರುವನೆಂಬ ಆಸೆಯಿಂದ ಹಾಗಾಗಿರಬಹುದು. 'ಅಬ್ಬಾ........ ಏನು ಛಳಿ........ಅಹಹ........' ಎಂದ. ಬಾಯಿ ತೆಗೆಸಿ ಆ ಕೊರೆಯುವ ನೀರನ್ನು ಒಂದು ತೊಟ್ಟು ಆ ಹಲ್ಲಿಗೆ ಸುರಿದೆ. ಛುಳ್ ಎಂದಿರಬೇಕು........ ಹಾಹಾರವ ಮಾಡಿದ. 'ಇಷ್ಟದೇವತಾ ಪ್ರಾರ್ಥನೆ ಮಾಡಿ........ಬಲಗೈ ಯನ್ನು ನೀರಲ್ಲಿ ಅದ್ದಯ್ಯ........' ಎಂದೆ. ಹಾಗೇ ಮಾಡಿದ. 'ಆಮೇಲೆ' ........ಕೈ ಸೆಟೆದುಹೋಗಿತ್ತು........'ಅಪ್ಪಯ್ಯ........ಹಾಗೇ ಏಳು ಸಲ ತಣ್ಣೀರಿನಲ್ಲಿ ಕೈ ಅದ್ದಿ........ಅದರಿಂದ........ನಿನ್ನ ಆ........ಹಬ್ಬಿವ........ ಗಿರಿಜಾ ಮೀಸೆ ತೀಡು........ಹಲ್ಲು ನೋವು....ಹೋಗುತ್ತೆ....' ಅಪ್ಪಯ್ಯ ನಿಗೆ ಎಲ್ಲಾ ಅರ್ಥವಾಯಿತು....ಮಫ್ಲರ್ ಸುತ್ತಿದ ತಲೆಗೋ, ಶಾಲು ಹೊದ್ದ ಎದೆಗೋ ಹೊಡೆಯಲು ಎತ್ತಿದ ಕೈ ಛಳಿಗೆ ಮುಂದೆ ಬರಲಿಲ್ಲ........ 'ಅಯ್ಯೋ........ಎಂಥಾ ಭಯಂಕರ ತಮಾಷೆಯೋ ಇದು........ಹಾ ಹಲ್ಲು ....ಚೂರ್ಣ....ಚ....ಚ....ಚಂಡಾಲ—! ಎಂದು ನಡುಗುತ್ತ ಒಳಗೋಡಿದ. ಈಗ ಯಾರ ಹತ್ತಿರಲೂ ಮಾತೇ ಆಡೋಲ್ಲ ಆಸಾಮಿ.



# ಸೀತಾ ಪತ್ರಗಳು



"ಈ ಕಲಿಯುಗವಾದ ಮೇಲೆ ರಾಮಾಯಣ ನಡೆದು, ಶ್ರೀರಾಮ ಸೀತೆಯನ್ನು ವಾಲ್ಮೀಕಿ ಆಶ್ರಮಕ್ಕೆ ಕಳುಹಿಸಿದಾಗ, ಸೀತೆ ತನ್ನ ಸ್ನೇಹಿತಳೊಬ್ಬಳಿಗೆ ತನ್ನ ಸ್ಥಿತಿಗತಿಗಳನ್ನು ಕುರಿತು ಪತ್ರಬರೆದಿದ್ದರೆ ಹೇಗಿರುತ್ತಿತ್ತು ?" ಎಂಬುದು ನಮ್ಮ ವೆಂಕಟ್ರಾಯನ ಪ್ರಶ್ನೆ. ಅವನು ಹಾಗೇ ತನ್ನ ಕೊಂಗು ದೃಷ್ಟಿಯಿಂದ ಕೆಲವು ಪತ್ರಗಳನ್ನು ನಿರ್ಮಿಸಿದ್ದಾನೆ. ನೀವೂ ಕೊಂಚ ಅವುಗಳ ಸವಿನೋಡಿ.

೧

ಕುಶಲ,

ವಾಲ್ಮೀಕಿ ಆಶ್ರಮ,
ತದಿಗೆ.

ಚಿ|| ಸೌ|| ಹ|| ಕುಂ|| ಪ್ರಿಯ ಗೆಳತಿ,

ಕುಶಲವೆಂದು ಹೇಗೆ ಬರೆಯಲಿ. ನಿಜವಾಗಿ ನಾನು ಕುಶಲವಾಗಿದ್ದೇನೆಯೇ? ಹೆಸರಿಗೇನು ಸೀತಾದೇವಿ, ಲೋಕೈಕ ಮಾತೆ, ಪ್ರಪಂಚ

ಕ್ಕೆಲ್ಲಾ ಆದರ್ಶ ರಮಣಿ, ಮಹಾ ಪತಿವ್ರತೆ—ನಿಜ. ಆದರೆ ನನ್ನ ಸುಖವನ್ನು ನಿನ್ನ ಮುಂದೆ ಹೇಳದೆ ಹೇಗಿರಲಿ? ಗೆಳತಿ, ನಿನ್ನ ಹಿಂದಿನ ಪತ್ರ ಕೈಸೇರಿತು. ಏನೋ ಆಲಸ್ಯ; ದುಃಖದಿಂದ ಬರೆಯಲು ತಡವಾಯಿತು; ಅಲ್ಲದೆ ನಿಮ್ಮೂರಿನ ಕಡೆ ಹೊರಡುವ ಗಾಡಿಗಳಾವುವೂ ಸಿಗಲಿಲ್ಲ. ಮೇಲಾಗಿ ರಾಮರಾಜ್ಯದಲ್ಲಿ ಅಂಚೆ ವ್ಯವಸ್ಥೆ ಅವಸ್ಥೆಯಾಗಿದೆಯೆಂದು ತಿಳಿಯೆಯಾ? ಸುಮಿತ್ರಿ 'ನಾರೀ ಭಾಗ್ಯ, ಪುರುಷನ ಪುಣ್ಯ' ಎಂದು ಆಗಾಗ ವಾಲ್ಮೀಕಿ ಗಳು ಹೇಳುತ್ತಿರುತ್ತಾರೆ. ನಿಜ, ನನ್ನ ಭಾಗ್ಯ ನೋಡು, ಅವರ ಪುಣ್ಯ ನೋಡು—ಅವರ ಪಾಡಿಗವರು ಚಿನ್ನದ ಸೀತೆ ಜೊತೆಗೆ ರಾಜ್ಯವಾಳುತ, ಮೈ ಕೈ ತುಂಬಿಕೊಂಡಿರೋ ನನ್ನ ಯಾವನೋ ಮಡಿವಾಳನ ಮಾತು ಕೇಳಿ ಕಾಡಿಗಟ್ಟಿದ್ದಾರೆ.

ಲೋಕವೆಲ್ಲಾ ನನ್ನ ಹೊಗಳುತ್ತಂತೆ—ನಾನೇ ಪ್ರಪಂಚದ ಸ್ತ್ರೀ ಸಮೂಹಕ್ಕೆ ಆದರ್ಶಪ್ರಾಯಳಂತೆ....ಯಾರಿಗಮ್ಮ ಬೇಕು ಈ ಹೊಗಳಿಕೆ ಯೆಲ್ಲಾ. ಯಾವ ಗಳಿಗೇಲಿ ಇವರ ಕೈ ಹಿಡಿದೆನೋ—ತವರುಮನೆಯಿಂದ ಹೊರಟದ್ದೇ ಕಾಡಿಗೆ ಪ್ರಯಾಣ. ಇವರದೇನೂ ತಪ್ಪಿಲ್ಲ, ಹಾಲಿನಂಥ ಮನು ಷ್ಯರು. ಯಾರೋ ತಂದೆ ಮಾತು ಮೀರಬಾರದೂಂತ ಅಂದರಂತೆ; ಅದಕ್ಕೆ ಅವರ ಮಾತು ಕಟ್ಟಿಕೊಂಡು ಹೊರಟೇಬಿಟ್ರು ಕಾಡಿಗೆ—ಏನೋ ಮೈದುನ ಕೂಡ ಇದ್ದ. ಹಾಯಾಗಿ ಹಣ್ಣು ಹಂಪಲು ತಿಂದುಕೊಂಡು, ಪ್ರಕೃತಿ ಸೌಂದರ್ಯದ ಸೊಗಸು ಸವಿಯುತ್ತಾ ಯಜಮಾನರ ಜೊತೆಗೊಂದಿಷ್ಟು ದಿನ ಇರೋಣಾಂದ್ರೆ ನನ್ನ ಹಣೆಯಲ್ಲಿ ಬರೆದಿಲ್ಲ— ಯಾವುದೋ ನನ್ನ ಸ್ವಯಂವರದಲ್ಲಾದ ಅವಮಾನ ಹೊಟ್ಟೇಲಿಟ್ಕೊಂಡು—ಆ ರಾಕ್ಷಸ ನನ್ನ ಏರೋಪ್ಲೇನ್‌ನಲ್ಲಿ ಹಾರಿಸಿಕೊಂಡು ಹೋದನಲ್ಲ—ನನ್ನ ಹಣೆಯಬರಹ ನೋಡು.

ಮುಖ್ಯವಾಗಿ ಗ್ರಹಚಾರ–ನಗನಗುತಾ ಸಂಸಾರ ಮಾಡಿಕೊಂಡಿರೋ ಪುಣ್ಯ ಪಡಕೊಂಡು ಬರಲಿಲ್ಲ. ಆ ಲಂಕೆಯೊಳಗೆ ಪಡಬಾರದ ಕಷ್ಟವೆಲ್ಲಾ ಪಟ್ಟುಬಿಟ್ಟೆ. ಆಗಾಗ ಅಯ್ಯೋ, ನಮ್ಮಪ್ಪನ ಮನೆಯಲ್ಲಿದ್ದಾಗ ಎಷ್ಟು ಸುಖದಿಂದ ಇದ್ದೆ. ಆ ಆಳು, ಕಾಳು, ಸೋಫ, ವಡವೆವಸ್ತ್ರ ಎಲ್ಲಾ ನೆನಪಿಗೆ ಬರುತ್ತೆ. ಏನು ಮಾಡೋದಮ್ಮ 'ಬಂದದ್ದೆಲ್ಲಾ ಬರಲಿ, ಶ್ರೀರಾಮನ

ದಯೆಯೊಂದಿರಲಿ' ಅಂತ ಇದ್ದೆ. ಮುಖ್ಯ ನನ್ನ ಗ್ರಹಚಾರ ಯಾರನ್ನು ಅಂದು ಏನು ಪ್ರಯೋಜನ? ನಿನ್ನ ಹಿರೇ ಮಗಳಿಗೆ ವರ ಗೊತ್ತಾಯಿತೇ? ಇಲ್ಲದಿದ್ದರೆ, ನಮ್ಮ ಆಶ್ರಮದಲ್ಲೇ ಒಬ್ಬನನ್ನ ನೋಡುತ್ತೇನೆ. ಯಾವುದಕ್ಕೂ ಕಾಗದ ಬರಿ. ಹುಡುಗರಿಗೆಲ್ಲಾ ಆಶೀರ್ವಾದಗಳು.

ಇತಿ ನಿನ್ನ ಗೆಳತಿ,
ಜಾನಕಿ.

೨

ಕ್ಷೇಮ, ವಾಲ್ಮೀಕಿ ಪರ್ಣಕುಟಿ, ಪೌರ್ಣಮಿ

ಚಿ|| ಸೌ|| ಹ|| ಕುಂ|| ಗೆಳತಿ ಸುಮಿತ್ರಳಿಗೆ—

ಜಾನಕಿ ಮಾಡುವ ಆಶೀರ್ವಾದಗಳು. ಉಭಯ ಕುಶಲೋಪರಿ ಸಾಂಪ್ರತ. ನಿನ್ನ ಪತ್ರ ನೋಡಿ ಸಂತೋಷವಾಯಿತು. ಕಷ್ಟಕಾಲ—ಆದರೆ ಮಾಡೋ ಕಾರ್ಯಗಳನ್ನು ಮಾಡದೆ ಇರೋದಕ್ಕಾಗುತ್ತದೆಯೇ? ಹೇಗೋ ನೀನೇ ಪುಣ್ಯವಂತೆ. ಮಗಳ ಕನ್ಯಾಸೆರೆ ಬಿಡಿಸಿ ಧನ್ಯಳಾಗುತ್ತಿ. ಅಳಿಯ ಹೇಗೆ? ಏನು ಕೆಲಸ? ತೀರ ಪಿತೃವಾಕ್ಯ ಪರಿಪಾಲನೆ ಮಾಡೋ ಸ್ವಭಾವವೇ? ಮೊದಲು ವಿಚಾರಿಸಿ ತಾಳೀ ಕಟ್ಟೋಕೆ ಏರ್ಪಾಟು ಮಾಡಿಸು. ಇಲ್ಲದೆ ವೃಥಾ ಮಗಳನ್ನು ಸತಾಯಿಸಬೇಡ. ನನಗಾಗಲೇ ದಿನ ತುಂಬಿವೆ. ವಾಲ್ಮೀಕಿಗಳು ಭವಿಷ್ಯ ಹೇಳಿದ್ದಾರೆ—ಅವಳಿ ಜವಳಿ ಗಂಡು ಹೆರುತ್ತೇನೆ—ಅದೇ ಒಂದು ಸಂತೋಷ. ಯಜಮಾನರ ಕಾಲಕ್ಕಂತು ಬರೀ ವನವಾಸವೇ ಆಯ್ತು. ಇನ್ನು ಈ ಮಕ್ಕಳಾದರೂ ಸುಖಪಡಿಸಿಯಾರು ಎಂಬ ಒಂದು ಆಸೆ. ಹಾಳು ನಾರು ಸೀರೆ ತೊಲಗಿ ಒಂದು ಪೀತಾಂಬರ ಉಟ್ಟೇನೋ ಎಂದು ಬಯಕೆ. ರಾಜಾಧಿರಾಜ ಶ್ರೀ ರಾಮಚಂದ್ರರ ಧರ್ಮಪತ್ನಿಯಾಗಿ ನನಗೆ ನಾರುಮುಡಿ ತಪ್ಪಲಿಲ್ಲ.

ಆ ಆಂಜನೇಯ ಸಮುದ್ರ ಹಾರಿ ನಾನಿರೋ ಬಳಿ ಬಂದು 'ಯಜಮಾನ್ರು ಹೇಳಿ ಕಳುಹಿಸಿದ್ದಾರೆ' ಎಂದು ಹೇಳಿದ—'ಹೇಗಪ್ಪಾ ಬರಲಿ ಈ ರಾಕ್ಷಸರ ಕೋಟೆ ದಾಟಿ' ಎಂದು ಹೇಳಿದೆ. ಆ ಕಪಿಮುಂಡೇದು ರಾವಣನ ಸಭೆಗೇ ಹೋಗಿ ಗಲಾಟೆಮಾಡಿ, ಬಾಲಕ್ಕೆ ಬೆಂಕಿ ಹಚ್ಚಿಕೊಂಡು ಊರಿಗೆ

ಊರೇ ಸುಟ್ಟುಬಿಡ್ತು. ಕೆಲವರು ಹೇಳುತ್ತಾರೆ ಸುಗ್ರೀವನ ವಾಯು—ಸೇನಾ ಪಡೆಯ ವಿಮಾನ ಬಂದು ಲಂಕೆ ಮೇಲೆ ಬೆಂಕಿ ಕಾರಿತು ಎಂದು. ಹಾಗೂ ಹೀಗೂ ಯಜಮಾನ್ರು ಯುದ್ಧದಲ್ಲಿ ಗೆದ್ದರು. ಹಿಂದೆ ನಾನು ಪುರಾಣದಲ್ಲೇ ಓದಿದ್ದೇನಲ್ಲ, ಕಲಿಯುಗದಲ್ಲಿ ಇಂಗ್ಲೇಂಡಿನವರು ಜರ್ಮನಿ ಗೆದ್ದರೂಂತ—ಹಾಗೆ ನಮ್ಮವರೂ ಗೆದ್ದರು. ಗೆದ್ದು ನನ್ನನ್ನು ಬಿಡಿಸಿಕೊಂಡರು. ನನಗಂತೂ ನನ್ನ ಸ್ವಾಮಿಯನ್ನು ನೋಡಿ ಹೊರೆ ಸಂತೋಷವಾಯಿತು. ಕೈ ಹಿಡಿದುಕೊಂಡು ವಾಕಿಂಗ್ ಹೋಗಲೇ ಎನಿಸಿತು. ರಾಮಚಂದ್ರ ದೇವರು 'ನೀನು ಶುದ್ಧಳಿದ್ದೀಯೋ ಇಲ್ಲೋ ತಿಳೀಲಿಕ್ಕೆ ಬೆಂಕಿ ಹಾರು' ಎಂದು ಹೇಳಿದರು. ನನ್ನ ಎದೆ ಗುಂಡಿಗೆ ಹಾರಿಹೋಯ್ತು ಫೈರ್‌ಪ್ರೂಫ್ ತೊಟ್ಟುಕೊಂಡು ನುಗ್ಗಿದೆ ಬೆಂಕಿಯೊಳಕ್ಕೆ. ಸುಖವಾಗಿ ಹೊರಕ್ಕೆ ಬಂದೆ. ನಮ್ಮ ರಾಯರು ಪರವಾಗಿಲ್ಲ ಎಂದುಕೊಂಡು ಊರ ಕಡೆ ಹೋಗೋ ಏರ್ಪಾಡು ಮಾಡಿದರು.

ಅಯ್ಯೋ ಬಹಳ ಬರೆದೆ—ನಿನ್ನ ಮಗಳ ಮದುವೆಗೆ ಬರೋಕಾಗೊಲ್ಲ ಕ್ಷಮಿಸು. ಮಗು ಎಲ್ಲಾದರೂ ಗಂಡನ ಜೊತೆಗೆ ಸುಖದಿಂದ ಇರಲಿ ಇನ್ನೇನು ವಿಶೇಷವಿಲ್ಲ.

ಇತಿ ನಿನ್ನ ಪ್ರಾಣಸ್ನೇಹಿತೆ,
ವೈದೇಹಿ.

೩

ಕ್ಷೇಮ

ನದೀತೀರದ ವಾಲ್ಮೀಕಾಶ್ರಮ,
ಅಮಾವಾಸ್ಯೆ.

ಗೆಳತಿ !

ನಿನ್ನ ಪತ್ರ ನೋಡಿ ಹೊರೆ ಸಂತೋಷವಾಯಿತು. ಮಗಳ ಮದುವೆ ಬಹಳ ವಿಜೃಂಭಣೆಯಿಂದ ನಡೆದದ್ದನ್ನು ನೀನು ವರ್ಣಿಸುವುದನ್ನು ಓದಿ ನಾನು ಆ ಸಂಭ್ರಮದಲ್ಲಿ ಮುತ್ತೈದೆಯರಿಗೆ ಅರಿಶಿನ ಕುಂಕುಮ ಕೊಡುತ್ತಾ ಇದ್ದಂತೆ ಭಾಸವಾಯಿತು. ನಾನಂತೂ ಪಡಬೇಕಾದ ಸುಖವನ್ನೆಲ್ಲಾ ಮನೋರಾಜ್ಯದಲ್ಲೇ ಚಿತ್ರಿಸಿ ಆನಂದಿಸುತ್ತಿದ್ದೇನೆ. ಬೀಗರ ಕಡೆಯವರು ಎದುರುಗೊಂಬುವ ದಿನ ಮುನಿದುಕೊಂಡಿದ್ದನ್ನು ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ಎಲ್ಲರ ಮನೆ ದೋಸೆಯೂ ತೂತೆ. ನನ್ನ ಮದುವೆಯೊಳಗೆ ನನ್ನ ಚಿಕ್ಕತ್ತೆ ಕೈಕೆಯಿಯವರು ಮೊದಲೇ ಕೋಪ,

ಅದರಲ್ಲಿ ಕೊಂಚ ಅವಮಾನವಾದರೆ ಕೇಳಬೇಕೇ? ಏನೋ ನಮ್ಮ ತಾಯಿ ಬೀಗರ ಕಡೆಯವರಿಗೆಲ್ಲಾ ಕಾಫಿತಿಂಡಿ ಕಳುಹಿಸಿದರಂತೆ, ದಾದಿಯವರ ಕೈಲಿ. ಬಂತಲ್ಲಮ್ಮ ನಮ್ಮ ಚಿಕ್ಕತ್ತೆಗೆ ಕೋಪ. 'ನಾವೇನು ಗತಿಯಿಲ್ಲದೆ ಬಂದಿದ್ದೇವೇನಿಲ್ಲಿಗೆ, ಭಿಕ್ಷೆ ಬೇಡಿದವರಿಗೆ ಅಕ್ಕಿ ಕಳಿಸೋ ಹಾಗೆ ದಾದೀರ ಕೈಲಿ ಮುಚ್ಚ್ಕೋರೆ, ಎರಡು ಚಕ್ಕುಲಿ, ಒಂದು ಲೋಟ ಕಷಾಯ ಕಳಿಸೋಕೆ-ಹೋಗಿ ಹೇಳಿ ನಿಮ್ಮ ಯಜಮಾನಿತ್ತಿಗೆ ಹೀಗಂತ' ಎಂದು ರೇಗಿ ಉರಿದು ಬಿದ್ದರು. ನೋಡು ಹೆಣ್ಣು ಹಡೆದವರ ಪಾಡು ಯಾವಕಾಲಕ್ಕೂ ಒಂದೇ. ನಮ್ಮ ತಾಯಿ ಚಿನ್ನದ ತಟ್ಟೆಗೆ ಹರಳಿನ ಚಿತ್ರ ಕೆತ್ತಿದ ತಾಟುಗಳಲ್ಲಿ ಫೇಣಿ, ಜಹಂಗೀರ್, ಚಿರೋಟಿ, ಬಾದಾಮಿ ಹಾಲು, ಸ್ಟ್ರಾಂಗ್ ಸ್ಪೆಷಲ್ ಒಂದೇ ಒಂದು ಲೋಟ ಕಾಫಿ (ಚಿಕ್ಕತ್ತೆಗೆ) ತೆಗೆದುಕೊಂಡು ಅರಮನೆ ವಾಲಗ ದೊಡನೆ ಬೀಗರಿಗೆ ಉಪಚರಿಸಿ ಬಂದರು. ಇಂಥಾದ್ದರಲ್ಲಿ ನಿಮ್ಮ ಬೀಗರು ಮುನಿದುಕೊಂಡದ್ದು ಸಾಮಾನ್ಯವಾದ ವಿಷಯವಲ್ಲವೇ? ನಾಳೆ ನಿನ್ನ ಎರಡನೆ ಮಗನ ಮದುವೇಲಿ ನೀನು 'ಚಿನ್ನದ ಗಡಿಯಾರ' ಚೈನು ನಾಲ್ಕು ಸವರನ್ನಿನದೂಂತ ಹೇಳಿ ಮೂರೂವರೆ ಸವರನ್ನಿಂದ ಮಾಡಿಸಿದ್ದೀರಿಂತ ಸೆಟೆದು ಕೂಡುತ್ತಿಯೋ ಇಲ್ಲವೋ ನೋಡುತ್ತೇನೆ. ಗೆಳತಿ, ಬಹಳ ಬರೆದೆ, ನನಗೋ ಇಲ್ಲಿ ಯಾರೂ ಸ್ನೇಹಿತರೇ ಇಲ್ಲ. ಮತ್ತೂ ಏನೂ ತಿಳಿಯದ ಋಷಿಕನ್ಯೆಯರ ಜೊತೆಗೆ ಕಾಲ ಹಾಕಬೇಕಾಗಿದೆ. ಇನ್ನು ಮುಂದೆ ಎರಡು ತಿಂಗಳವರೆಗೂ ಕಾಗದ ಬರೆಯಲಾಗುತ್ತೋ ಇಲ್ಲವೋ ಗೊತ್ತಿಲ್ಲ. ಯಾಕೆಂದರೆ ಬಾಣಂತಿತನದಲ್ಲಿರುತ್ತೇನೆ.

ಹೆಚ್ಚೇನೂ ವಿಶೇಷವಿಲ್ಲ, ಅಯೋಧ್ಯೆಯಿಂದ ಯಾತ್ರೆಗೆ ಹೋದ ಕೆಲವರಿಂದ ರಾಮರಾಜ್ಯ ಬಹಳ ಚೆನ್ನಾಗಿದೆಯೆಂದು ತಿಳಿಯಿತು. ದೇವರ ದಯೆಯಿಂದ 'ಯಥಾರಾಜ ತಥಾಪ್ರಜಾ' ಅನ್ನುವಂತೆ ಪ್ರಜೆಗಳಾರೂ ಹೆಂಡಂದಿರನ್ನು ಹಜಾಮರ ಮಾತು ಕೇಳಿ ಕಾಡಿಗಟ್ಟಿಲ್ಲವಂತೆ. ಯಜಮಾನರೇನೋ ನನಗಾಗಿ ಚಿಂತಿಸುತ್ತಾರಂತೆ. ಹೆಚ್ಚು ವಿಷಯ ಮುಂದಿನ ಕಾಗದದಲ್ಲಿ.

ಇತಿ ಆಶೀರ್ವಾದಗಳು,

ಸೀತಾದೇವಿ.

೪

ವಾಲ್ಮೀಕಿ ಕುಟೀರ,
ಶ್ರಾವಣ, ಪಶಮಿ.

ಪ್ರಿಯ ಗೆಳತಿ,

ನಿನ್ನ ಪತ್ರ ಕೈಸೇರಿತು ಹೌದು, ಶ್ರಾವಣಮಾಸ ಹಬ್ಬ ಹರಿದಿನಗಳ ತಿಂಗಳು. ನಿನ್ನಿಂದ ಉತ್ತರ ಬರುವುದು ತಡವಾದುದರಲ್ಲಿ ಆಶ್ಚರ್ಯ ವೇನು? ರಾಮರಾಜ್ಯ ಹೇಗಿದೆ? ಹತ್ತಾರು ಕಡೆಗಳಿಂದ, ಹಲವಾರು ಸುದ್ದಿ ಗಳು ನನ್ನ ಕಿವಿಗೆ ಬೀಳುತ್ತಿದೆ. ಯಜಮಾನರು ನನಗಾಗಿ ಬಹು ಪರಿತಪಿಸು ತ್ತಿದ್ದಾರೆಂದು ನನ್ನ ಪಂಚಮ ದಳದವರಿಂದ (Fifth columnists) ವರದಿಯಾಗಿದೆ. ಮತ್ತೆ 'ಪ್ರಜೆಗಳಿಗಾಗಿ ತ್ಯಾಗ' ಎಂದು ಸಮಾಧಾನ ತಂದುಕೊಳ್ಳುತ್ತಾರಂತೆ. ಅಂತೂ ಇಂತೂ ಅವರಿಗೆ ನನ್ನೊಡನೆ ಸಂಸಾರ ಮಾಡಿಕೊಂಡಿರೋದು ಹಣೇಲಿ ಬರೆದಿಲ್ಲ. ಒಂದು ವಿಷಯಕ್ಕೆ ಮೇಲೂಂತ್ಲೆ ಅನ್ನು. ಏಕೆಂದರೆ 'ಪೀತಾಂಬರ ಹಳೆಯುವಾಗುತ್ತ ಬಂತು, ವಾರಣಾಸಿಗೆ ಹೇಳಿ ಕಳಿಸಿ' ಅಂದರೆ 'ಜನಗಳ ಹತ್ತಿರ ತೆರಿಗೆ ಅಂತ ವಸೂಲ್ಮಾಡಿ ಹೆಂಡತಿಗೆ ಸೀರೆ ತಂದುಕೊಟ್ಟ ಎಂದು ಜನ ಆಡಿಕೊಳ್ಳುತ್ತಾರೆ' ಎಂದು ಕೊರಗುವ ಸ್ವಭಾವ ಅವರದು. ಶುದ್ಧ ಗಾಂಧಿ ಜಾತಿಗೆ ಸೇರಿದ ಮನುಷ್ಯ. 'ಬ್ಲೌಜಿನ ಬಟ್ಟೆ ಚೆನ್ನಾಗಿದೆ ಚಿ|| ಲಕ್ಷ್ಮಣ ಸೌ|| ಊರ್ಮಿಳಾಗೆ ತಂದು ಕೊಟ್ಟಿದ್ದಾನೆ ಅಂಥಾದ್ದು ಒಂದು ಆರುಗಜ ತರಿಸಿಕೊಡಿ' ಎಂದರೆ 'ಖದ್ದರ್ ಹಾಕೋದನ್ನ ಅಭ್ಯಾಸ ಮಾಡು—ಚರಖಾ ಇದೆಯಲ್ಲಾ ನೂಲು ತೆಗಿ' ಎಂದೆಂದು ಬಿಡುತ್ತಾರೆ. ಹದಿನಾಲ್ಕು ವರ್ಷ ನಾರುಮಡಿ ಉಟ್ಟವಳಿಗೆ ಖದ್ದರ್ ಹಿಡಿಸುತ್ತದೆಯೆ? 'ಬೇಸತ್ತು ಬೇರೆ ಆದರೆ ಪಾಲಿಗೆ ಅತ್ತೆ ಬಂದಳು' ಎಂಬ ಸಮಾಚಾರವಾಗಿದೆ.

ಲಂಕೆಯಲ್ಲಿದ್ದಾಗ ರಾವಣ ಸಿಲ್ಕಿನ ಜಾರ್ಜೆಟ್ಟಿನಿಂದ ಹಿಡಿದು ವಾರಣಾಸಿ ಪೀತಾಂಬರದವರೆಗೆ ಸಾವಿರ ನಮೂನೆ ಸೀರೆ ರಾಸಿ ನನ್ನ ಮುಂದೆ ಹಾಕಿ 'ಸೀತೆ! ಇದೆಲ್ಲಾ ನಿಂದೇ. ಮೇಲೆ ಈ ರಾಜ್ಯವೂ ನಿನ್ನದೇ ನೀನು ನನ್ನವಳಾಗು' ಎಂದು ಸಾವಿರ ಸಲ ಪೀಡಿಸಿದ. ಯಜಮಾನರು ಬಂದು ಸೆರೆಯಿಂದ ಬಿಡಿಸಿ ಇದಕ್ಕೂ ಮಿಗಿಲಾದ ಪೀತಾಂಬರಗಳನ್ನು

ಕೊಡಿಸುತ್ತಾರೆ, ಇದೇನು ಮಹಾ ಎಂದು ಎಡಗಾಲಿನ ಕಿರುಬೆರಳ ಕೊನೆಯ ಧೂಳಿನಿಂದ ಎಲ್ಲವನ್ನೂ ಒದ್ದು ಬಿಟ್ಟೆ. ನೋಡಿದೆಯಾ ಯಜಮಾನರು ಕೊಡಿಸಿದ್ದು, ವನವಾಸ ಮತ್ತು ನಾರುಮಡಿ.

ನೀನು ವರ್ಣಿಸುವ ಶ್ರಾವಣದ ಹಬ್ಬ ಹರಿದಿನಗಳು ಮತ್ತೆ ನನಗೆ ತೌರುಮನೆಯಲ್ಲಿ ನಡೆದ ಹಬ್ಬಗಳನ್ನು ನೆನಪಿಗೆ ತರುತ್ತವೆ. ಈ ಪರ್ಣ ಕುಟಿಯಲ್ಲೂ ಹಬ್ಬ ಹರಿದಿನಗಳುಂಟು. ಆದರೆ ನೈವೇದ್ಯಕ್ಕೆ ಕಂದ ಮೂಲಾದಿ ಫಲಗಳೇ ಹೆಚ್ಚು. ಹೂರ್ಣದ ಹೋಳಿಗೆ—ಕಟ್ಟಿನ ಸಾರು. ಎಳ್ಳುಪುಡಿ, ಚಿತ್ರಾನ್ನ, ಕಳ್ಳೇಬೇಳೆ ಸೌತೆಕಾಯಿ ಕೋಸುಂಬರಿ (ಕೊಂಚ ಖಾರವಾಗಿ ಹುಳಿ ಮುಂದಾಗಿರಬೇಕು) ಬೂದುಗುಂಬಳಕಾಯಿ ಮಜ್ಜಿಗೇ ಹುಳಿ—ಎಲ್ಲಾ ಬಾಯಲ್ಲಿ ನೀರೂರಿಸುವ ವಸ್ತುಗಳೇ—ಇವೊಂದೂ ಕಾಣೆ. ಮೊನ್ನೆ ಬಹಳ ಬಯಕೆಯಾಗಿ ತಡೆಯಲಾರದೆ ಹತ್ತಿರದ ತೋಟದಿಂದ ಬಾಳೆಕಾಯಿ ತರಿಸಿ ಬೋಂಡಾ ಮಾಡಿಸಿದ್ದೆ. ವಾಲ್ಮೀಕಿಗಳು ಬಸುರಿಯೆಂದು ನಕ್ಕು ಸುಮ್ಮಗಾದರು. ಇಲ್ಲೆಲ್ಲಾ ತಿಂಡಿ ತಿನಿಸಿನ ಮೇಲೆ, ಅಷ್ಟು ಆಸೆಯಿಲ್ಲ. ಬರೀ 'ಭಕ್ತಿ ಭಕ್ತಿ ಮುಕ್ತಿ' ಎಂದು ಬಡಕೊಳ್ಳುತ್ತವೆ. ನಾನೂ ಕೂಡಾ ಸುತ್ತಣ ವಾತಾವರಣಕ್ಕೆ ವಶಹೋಗಿ 'ರಾಮ ರಾಮ' ಎಂದು ನಾಚಿಕೆ ಬಿಟ್ಟು ಗಂಡನ ಹೆಸರು ಹಿಡಿದು ಧ್ಯಾನಮಾಡುತ್ತಿದ್ದೇನೆ. ಆದರೂ ಅವರಿಗೆ ನನ್ನ ಕೂಗು ಕೇಳಿದೇನೋ? ಎಂದು ಕೇಳುತ್ತದೋ ನೋಡೋಣ.

ಏನೇನೋ ಬರೆದು ಬಿಟ್ಟೆ. ನಿನ್ನ ಮದುವೆಯಾದ ಮಗಳು ನಿಮ್ಮಲ್ಲೇ ಇದ್ದಾಳೆ ತಾನೆ? ಮಗಳ ನಿಷೇಕ ಇನ್ನೂ ಒಂದು ವರ್ಷ ಮಾಡಬೇಡ. ಅಳಿಯ ಎಷ್ಟಾದರೂ ಬಡಕೊಳ್ಳಲಿ. ಬಾಣಂತನ ಮಾಡುವವಳಾದ ನೀನು ಹುಶಾರಿರಬೇಕಲ್ಲದೆ ಅವರಲ್ಲ. ಬೀಗರಿಗೇನು ಮನೆಗೆ ಸೊಸೆ ಬಂದರೆ ಸಾಕೆಂದಿರುತ್ತಾರೆ, ಉಪುಗಾರಣೆ ಕೆಲಸಕ್ಕೆ. ಹುಡುಗರಿಗೆಲ್ಲಾ ಆಶೀರ್ವಾದಗಳು. ಈ ಕಡೆ ಯಾರಾದರೂ ಬರುವವರಿದ್ದರೆ ಎರಡು ಗಜ ಫ್ಲಾನಲ್ ಕಳಿಸಿಕೊಡು. ಮುಂಬರುವ ಕಂದಮ್ಮಗಳಿಗೆ ಹೊಚ್ಚೋದಕ್ಕೆ.

ಹೆಚ್ಚು ವಿಷಯ ಮುಂದಿನ ಪತ್ರದಲ್ಲಿ

ಇತಿ ನಿನ್ನವಳು, ಸೀತಾದೇವಿ.

# ಗುಂಡನ ಗಂಡಾಂತರ



ಗುಂಡ ಉಂಡ ಮನೆಗೆ ಎರಡು ಬಗೆದ. 'ಯಾರದ್ದೇನು ಮುಲಾಜು ದರದಿದ್ದರೆ ತಾವೇ ಕಾಲಿಗೆ ಬೀಳ್ತಾರೆ, ನನಗೆ ಬೇಡಾದ್ದಕ್ಕೆ ಇವರದ್ದೇನು ಜುಲುಮೆ........ಬೇಡ' ಎಂದು ಖಡಾಖಂಡಿತವಾಗಿ ಹೇಳಿ ಬಿಟ್ಟ.

ಆದರೆ ಆ ತರುಣೀಮಣಿಗೆ ಈ ಮೋಹನಾಂಗನಿಗೇ ಮಾಲೆ ಹಾಕ ಬೇಕೆಂಬ ಚಪಲ. ಅಂಥ ಪ್ರೇಮಕ್ಕೆ ಸಿಕ್ಕಿ ಆ ಲಲನಾಮಣಿ ಗುಂಡನನ್ನಲ್ಲದೆ ಬೇರಾರನ್ನೂ ವರಿಸೆನೆಂದಳು. ಭೀಮೋಜಿರಾಯರಿಗೆ ಗುಂಡ ಕೈಕೊಟ್ಟದ್ದು ಬಹಳ ತಾಪತ್ರಯಕ್ಕೀಡುಮಾಡಿತು. ಪೋಲೀಸ್ ಇನ್ಸ್ಪೆಕ್ಟರಾದರೂ ಮಗಳಿಗೆ ಗಂಡು ಹುಡುಕಲೇಬೇಕಷ್ಟೆ. ಕೈಗೆ ಸಿಕ್ಕ ಗಂಡು ಒಲ್ಲೆನೆಂದು ಹೇಳಿದ್ದು ರಾಯರನ್ನು ಬಹಳ ಚಿಂತೆಗೀಡುಮಾಡಿತು. ತಮ್ಮ ಏಕೈಕ ಪುತ್ರಿ ಕುಪ್ಪಮ್ಮನ ಕಲ್ಯಾಣ ಹೇಗೆ ಆದೀತೆಂಬುದು ದೊಡ್ಡ ಯೋಚನೆಯೇ ಆಯಿತು. ಕಾರಣ ಕುವರಿ ಕುಪ್ಪಮ್ಮ ಕುಬ್ಜೆ ಸಾಲದ್ದಕ್ಕೆ ಕಪ್ಪು.

ನಿಜ ಅವರ ಮನೆಯಲ್ಲೇ ವಾರ ಹಚ್ಚಿಕೊಂಡಿದ್ದ. ಹುಡುಗ ಯೋಗ್ಯನೆಂಬುದು ಕಂಡು ಮನೆಯಲ್ಲೇ ಇಟ್ಟುಕೊಂಡರು. ಕಡೆಗೆ ಹೆಣ್ಣೂ ಕೊಡುತ್ತೇನೆಂದರು. ಕುಪ್ಪಮ್ಮ ಗುಂಡನು ಮನೆಗೆ ಬಂದ ದಿನವೇ ಮೋಹಗೊಂಡು ಆಗಿನಿಂದಲೇ ನಾಚತೊಡಗಿದ್ದಳು. ಗುಂಡನೂ ಮೊದಲು ಬ್ರಹ್ಮ ಸಂಕಲ್ಪವಿದ್ದರೆ ಯಾಕಾಗಬಾರದು? ಎಂದು ಭೀಮೋಜಿರಾಯರ, ಆಸ್ತಿಪಾಸ್ತಿಗಳನ್ನು ವಿವರವಾಗಿ ತಿಳಿಯಲು ಮೊದಲು ಮಾಡಿದ.

ಕಾಲ ಬದಲಾಯಿಸಿತು. ಗುಂಡ ಬಿ.ಎ., ಎಂಬ ಎರಡು ಅಕ್ಷರ ಸಂಪಾದಿಸಲು ಆಗಲೇ ಇಲ್ಲ. ಶಾಲೆಗೆ ಶರಣು ಹೊಡೆದು ಕೆಲಸಕ್ಕೆ ಸೇರಲು ಮನಸ್ಸುಮಾಡಿದ. ಸರಿಯಾದ ಕೆಲಸ ಸಿಕ್ಕಲಿಲ್ಲ. ಭಾವೀ ಮಾವನವರು ಮನಸ್ಸುಮಾಡಿದ್ದರೆ ಯಾವ ದೊಡ್ಡ ಮಾತು? ಆದರೆ ಹುಡುಗಿಯ ತಲೆಯ ಮೇಲೆ ಎರಡು ಅಕ್ಕಿ ಕಾಳು ಬೀಳುವ ತನಕ ಅವರಿಗೆ ಏನು ಮಾಡಲೂ ಇಚ್ಛೆ ಇರಲಿಲ್ಲ. ಕಾರಣ ಗುಂಡ ಒಂದು ತರಹ ಆದದ್ದು. ಮದುವೆಯಾದ ಮೇಲೆ ತಮ್ಮ ಖಾಸಾ ಡಿಪಾರ್ಟ್‌ಮೆಂಟಿನಲ್ಲೇ ಒಂದು ಸಬ್ ಇನ್ಸ್‌ಪೆಕ್ಟರ ಕೆಲಸ ಕೊಡಿಸಿದರಾಯಿತೆಂದು ತಡೆದಿದ್ದರು.

ಗುಂಡನ ಮನಸ್ಸೇ ಬದಲಾಯಿತು. ಆಸಾಮಿ 'ಏರ್‌ಕ್ರಾಫ್ಟ್'ಗೆ ಸೇರಿದ. ಆ ಧರ್ಮಸತ್ರದಲ್ಲಿ ತಿಂಗಳಿಗೆ ೧೫೦ ರೂ. ಕೊಟ್ಟರು. ಕುಪ್ಪಮ್ಮನನ್ನು ಮರೆತ, ಬೇಡವೆಂದ, ಕಾರಣ ಭೀಮೋಜಿರಾಯರ ಪತ್ನಿ ಗಂಡು ಹೆತ್ತರು. ಭೀಮೋಜಿರಾಯರಿಗೆ ಮಹದಾನಂದವಾಯಿತು. ಗುಂಡನಿಗೆ ಇದ್ದ ಆಸೆ ಇಂಗಿಹೋಯಿತು. ಒಬ್ಬಳೇ ಮಗಳು, ಇದ್ದ ಆಸ್ತಿ ಅವಳ ಕೈಹಿಡಿದರೆ ತನ್ನ ಪಾಲೇ ಆಗುತ್ತದೆಂಬ ಹಿರಿದಾಸೆ ಹರಿದುಹೋಯಿತು. 'ನನಗೆ ಬೇಡ—ಈಗ ಮದುವೆ ಬೇಡ' ಎಂಬ ಲೋಕಾಭಿರಾಮ ಪ್ರಾರಂಭಿಸಿದ. ಮನೆಬಿಟ್ಟು ಹೋಟಲು ಸೇರಿದ. ಕೈಯಲ್ಲಿ ಹಣ ಸೇರಿದಂತೆ ಸೂಟು, ಹ್ಯಾಟು, ಸಿಗರೇಟುಗಳು, ಒಂದೊಂದಾಗಿ ಬಂದವು. ಮೊದಲೇ ಇದ್ದ ಠೇಂಕಾರದ ಜೊತೆಗೆ ಇವೆಲ್ಲಾ ಭೂಷಣಪ್ರಾಯಃವಾಗಿ ಸೇರಿಬಂದವು.

ಭೀಮೋಜಿರಾಯರಿಗೆ ವರ್ಗವಾಯಿತು. ಊರುಬಿಟ್ಟು ಹೊರಟು ಹೋದರು. ಕುಪ್ಪಮ್ಮ ಗುಂಡನಿಗಾಗಿ ಚಿಂತಿಸಿ ಚಿಂತಿಸಿ ಸೊರಗ ತೊಡಗಿದಳು. ತಾಯಿಯ ಬಳಿ ಗುಂಡನನ್ನಲ್ಲದೆ ಬೇರಾರನ್ನೂ ಒಲ್ಲೆನೆಂದು

ಹೇಳಿಬಿಟ್ಟಳು. ಗುಂಡನೋ ಊರಲ್ಲಿನ ಚಲುವೆಯರನ್ನೆಲ್ಲಾ ನೋಡಿ ನೋಡಿ ಹಾಗಿರುವುದು ಬೇಕು ಹೀಗಿರುವುದು ಬೇಕೆಂದು ಆಗಬೇಕಾದ ಹೆಣ್ಣಿನ ಬಗ್ಗೆ ನಿರ್ದಿಷ್ಟ ರೂಪು ರೇಖೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದ. ಗುಂಡೂರಾಯನಿಗೆ ಇನ್ನೊಂದು ಆಸೆ ಎಂದರೆ ಹೆಣ್ಣಿನ ತಂದೆ ಕಡೆ ಪಕ್ಷ ೩೦೦೦ ರೂಪಾಯಿಯಾದರೂ ಕೊಡಬೇಕೆಂಬುದು. ಅಷ್ಟಿಲ್ಲದೆ ಯಾರನ್ನೂ ಲಗ್ನವಾಗುವುದಿಲ್ಲವೆಂದು ನಿರ್ಧಾರಮಾಡಿದ್ದ.

ಬೊಂಬಾಯಿಯಿಂದ ಗುಂಡೂರಾಯನಿಗೆ ಒಂದು ಪತ್ರ ಬಂತು. 'ಚಲುವೆ, ಒಬ್ಬಳೇ ಮಗಳು, ೧೭ ವರ್ಷ—ಒಳ್ಳೆ ವರೋಪಚಾರ. ಮೇಲೆ ೩೫೦೦ ರೂಪಾಯಿ ವರದಕ್ಷಿಣೆ, ಕೂಡಲೆ ಬಂದು ಹುಡುಗಿಯನ್ನು ನೋಡಿ ಕೊಂಡು ಹೋಗಿ ಇತಿ ನಿಮ್ಮವ ಉಗ್ರಸೇನರಾವ್.' ಗುಂಡನಿಗೆ ರಜಾ ಸಿಕ್ಕುವುದು ಕಷ್ಟ. ಹೇಗೋ ಒಂದೇ ದಿನ ಬೊಂಬಾಯಿನಲ್ಲಿದ್ದು ಹೆಣ್ಣು ನೋಡಿಕೊಂಡು ಮರು ರೈಲಿಗೇ ಹೊರಟುಬರುವಷ್ಟು ಅವಕಾಶ ಮಾತ್ರ ಸಂಪಾದಿಸಿದ. ಸಿಗರೇಟು ಸೇದುತ್ತಾ ಹೊರಟೇ ಬಿಟ್ಟ ಬೊಂಬಾಯಿಗೆ.

ಬೊಂಬಾಯಿಯಲ್ಲಿ ಗಲಾಟೆ. ಕೋಮುವಾರು ಕಲಹ, ಖೂನಿ, ಇರಿತ, ಗೋಳೀಬಾರು. ಈ ಅವಾಂತರಗಳ ನಡುವೆ ಹೆಣ್ಣು ನೋಡಲು ಮಾತುಂಗಕ್ಕೆ ಟ್ರಾಮಿನಲ್ಲಿ ಹೊರಟಿದ್ದ. ಉಗ್ರಸೇನರಾಯರ ಮನೆ ಸಿಕ್ಕು ವುದು ಕಷ್ಟವಾಗಲಿಲ್ಲ. ಕಾರಣ ಅವರು ಅಲ್ಲಿನ ಪೋಲೀಸ್ ಸೂಪರಿಂ ಟೆಂಡೆಂಟ್ ಆಗಿದ್ದರು. ಪೋಲೀಸ್ ಅಧಿಕಾರಿಗಳ ಮಗಳೇ ತನಗೆ ಮಡದಿ ಯಾಗತಕ್ಕದ್ದೆಂದು ಬ್ರಹ್ಮ ಸಂಕಲ್ಪವಿರಬೇಕೆಂದು ತರ್ಕಿಸಿದ.

ಉಗ್ರಸೇನರಾಯರು ಬಾಗಿಲಲ್ಲೇ ಕಾದಿದ್ದು ಆದರದಿಂದ ಬರಮಾಡಿ ಕೊಂಡರು. ನಕ್ಕರೆ, ಮಾತಾಡಿದರೆ ಹೆದರಿಕೆ ಬರುವ ವ್ಯಕ್ತಿತ್ವ ಅವರದು. ಹುರಿ ಮೀಸೆ, ಯಾವಾಗಲೂ ಅರಳಿದ ಮೂಗು ಅದೆಂತಹ ದಂತ ಪಂಜ್ತಿಯೋ ಎರಡು ಕೋರೆ ಹಲ್ಲುಗಳಂತೆ ಕಾಣುತ್ತಿದ್ದುವು. ಎತ್ತರನೆ ಆಳು, ಕಪ್ಪುಬಣ್ಣ.

ನಡುಮನೆ ಸಿಂಗರಿಸಿದ್ದರು. ಗುಂಡ ಹೋಗಿ ಸೋಫಾದಮೇಲೆ ಕುಕ್ಕರಿಸಿದ. ಸುತ್ತಲೂ ನೋಡಿದ, ಎದುರು ಗೋಡೆಯ ಮೇಲೆ ಕಾಡು ಕೋಣದ ತಲೆ, ಅದರೆದುರಿಗೇ ಹುಲಿ ತಲೆ, ಗುಂಡನನ್ನೇ ನುಂಗುವಂತೆ

ನೋಡುತ್ತಿತ್ತು, ಮೂಲೆಯೊಂದರಲ್ಲಿ ಬಾರುಮಾಡಿದ ಬಂದೂಕು, ಗೋಡೆಯ ಮೊಳೆಗೆ ನೇತುಹಾಕಿದ ಕತ್ತಿ. ಮೂಲೆಯಲ್ಲಿ ಲಾಠಿ, ಎಲ್ಲಾ ಭಯಾನಕ ವಸ್ತುಗಳೇ.

ಇನ್ನಿಬ್ಬರು ಬಂದರು. ಉಗ್ರಸೇನರಾಯರ ಸ್ನೇಹಿತರಂತೆ. ಒಳಗೆ ಏಳೆಂಟು ಜನ ಹೆಂಗಸರು ಗುಜು ಗುಜು ಮಾತಾಡುತ್ತಿದ್ದರು. ಇದೇನಾಶ್ಚರ್ಯ? ಗುಂಡನ ಪರಮಮಿತ್ರ ಗೋವಿಂದಯ್ಯ ಹೇಗೆ ಬಂದ ಇಲ್ಲಿಗೆ? ಭೀಮೋಜಿರಾಯರ ದೂರದ ಬಳಗ ಈತ. ಉಗ್ರಸೇನರಾಯರಿಗೆ ಹೇಗೆ ಗೊತ್ತು? 'ಗೋವಿಂದ್ ನನ್ನ ಜೊತೆಗೆ ಯಾರೂ ಇರಲಿಲ್ಲ ನೀನಾದರೂ ಸಿಕ್ಕೆಯಲ್ಲ—ಬಾ' ಎಂಮ ಕರೆದ, 'ಹಲ್ಲೋ ಗೂಂಡಾ' ಎಂದು ಬೆನ್ನು ಗುದ್ದಿ ಪಕ್ಕದಲ್ಲಿ ಕುಳಿತ. ಮೊದಲಿಂದ ಗೋವಿಂದಯ್ಯ ಗುಂಡನನ್ನು ಗೂಂಡಾ ಎಂದೇ ಕರೆಯುತ್ತಿದ್ದ.

ಪುಷ್ಕಳ ಫಲಹಾರ ನಡೆಯಿತು. ಹುಡುಗಿ ಬರುವುದೊಂದು ಬಾಕಿ. ಗುಂಡನಿಗೆ ತನ್ನಿನಯಳನ್ನು ನೋಡಿಕೊಂಡು ಅಂದೇ ವಾಪಸ್ಸು ಹೊರಡ ಬೇಕೆಂಬ ಆತುರ, ಹೆಣ್ಣು ನೋಡುವ ಆತುರ.

'ಬಾಮ್ಮ........ಹೀಗೆ ಬಾ....ನಾಚ್ಕೆ ಪಟ್ಕೊಬೇಡ ಕೂತ್ಕೊ....' ಎಂದರು ಉಗ್ರಸೇನರು. ಗುಂಡ ನೋಡಿದ....ಕಣ್ಣುಜ್ಜಿ ನೋಡಿದ ನಸು ನಾಚುತ್ತಾ ತಲೆ ತಗ್ಗಿಸಿ ನಿಂತಿದ್ದಳು........ಕುಪ್ಪಮ್ಮ!! ಭೀಮೋಜಿರಾಯರ ಕುಪ್ಪಮ್ಮ. ಗುಂಡ ತಡೆಯಲಾರದ ಕೋಪದೊಡನೆ.... 'ಮೋಸ.... ಕೃತ್ರಿಮ....ನಾ ಒಲ್ಲೆ....ಮೋಸ' ಎಂದು ಕೂಗಿ ಎದ್ದು ನಿಂತ. ಕಣ್ಣು ಕೆಂಪಗೆ ಮಾಡಿದ್ದ.

ಕೂಡಲೇ ವಾಪಸು ಹೋಗಿಬಿಡಬೇಕೆಂದು ಸ್ಟೇರ್ಷ ಕಡೆ ಓಡ ತೊಡಗಿದ. ಸರಸರನೆ ಕೈಬೀಸಿಕೊಂಡು ಕೋಪದಿಂದ ಹೋಗುತ್ತಿದ್ದ. ಗೋವಿಂದಯ್ಯ. ಅವನ ಬೆನ್ನುಹತ್ತಿ 'ಗೂಂಡಾಾ........ಗೂಂಡಾಾ....ಬಾ ನಿಲ್ಲೋ' ಎಂದು ಕೂಗಿದ....ಗುಂಡ ಓಡೇ ಓಡಿದ....ಗೋವಿಂದ ಕೂಗೇ ಕೂಗಿದ 'ಗೂಂಡಾಾ....ಗೂಂಡಾಾ'. ಬೊಂಬಾಯಿ ಜನ ಗೂಂಡಾ ಎಂಬುದನ್ನು ಕೇಳಿ ಓಡುತ್ತಿದ್ದ ಗುಂಡನನ್ನು 'Goonda Goonda ಪಕಡೋ' ಎಂದು ಹಿಡಿದುಬಿಟ್ಟರು. ಪೋಲೀಸರು ಬಂದರು....ಗುಂಡ

ನನ್ನು ಹಿಡಿದು ಲಾಕಪ್ಪಿನಲ್ಲಿ ಹಾಕಿಬಿಟ್ಟರು. ಗುಂಡ ಅಂಗಲಾಚಿ ಬೇಡಿಕೊಂಡ. ಇದ್ದ ಸ್ಥಿತಿ ಬಡಕೊಂಡ. ಆದರೂ ಬಿಡಲಿಲ್ಲ.

ಮರುದಿನದವರೆಗೂ ಅಲ್ಲೇ ಒದ್ದಾಡಬೇಕಾಯಿತು. 'ಗೂಂಡಾ ಬದ್ಮಾಷ್' ಎಂದು ಬೈಗಳ ಸುರಿಮಳೆ. ಅವನಂಥವರಿಂದಲೇ ಈ ಕೊಲೆ ಇರಿತಗಳು ಆದವೆಂದು ಪೋಲಿಸರು ಎರಡು ಏಟೂ ಬಿಗಿದರು. ಪೋಲೀಸ್ ಸೂಪರಿಂಟೆಂಡೆಂಟರು ಬಂದರು. ಶ್ರೀಮಾನ್ ಉಗ್ರಸೇನರಾಯರು, ಕೋಪಾಗ್ನಿಯಲ್ಲಿ ಮಿಂದ ಕಲಿಭೀಮನಂತೆ ಕಂಡರು ಗುಂಡನಿಗೆ, ಮುಖ ಮುಸಡಿ ನೋಡದೆ ಮೊದಲು ಎರಡು ಬಿಗಿದರು. ಆಸಾಮಿ ಪಾತಾಳಕ್ಕಿಳಿದುಹೋದ. ಗುಂಡನ ಗುಂಡಿಗೆ ಹಾರಿಹೋಯಿತು.

'ಉಂಡುಮನೆಗೆರಡು ಬಗೆದ ಗುಂಡಾ....ವಾರದನ್ನ ಹಾಕಿ ಓದೋಕೆ ಫೀಸು ಕೊಟ್ಟು, ಬಟ್ಟೆಬರೆ ಕೊಟ್ಟದನ್ನ ಮರೆತು, ನಮಗೇ ಸತಾಯಿಸಲು ಪ್ರಾರಂಭಿಸಿದೆಯಾ—ಒಳ್ಳೆಯ ಮಾತಿನಿಂದ ಬಾಯಿ ಮುಚ್ಚಿಕೊಂಡು ಕುಪ್ಪಮ್ಮನ್ನ ಮದುದೆಮಾಡ್ಕೊಂಡು ಊರಿಗೆ ಕರ್ಕೊಂಡು ಹೋಗ್ತಿಯೋ ಇಲ್ಲ ಗುಂಡನಲ್ಲ........ಗೂಂಡಾಂತ ತೀರ್ಮಾನಿಸಿ ಗುಂಡಿನಿಂದ ಹೊಡೆ ಸೋಣವೊ........ಬೊಗಳು ಬೇಗ' ಎಂದು ಬೆಂಕಿ ಕಾರಿದರು. ಗುಂಡನಿಗೆ ಏನೂ ತೋಚದೆ....ಏನೋ ತೊದಲಲು ಹೋದ....ಎರಡು ಬಿಗಿದರು. ಕಾಗದ ಪೆನ್ನು ಅವನಿಗೆ ಕೊಟ್ಟು ನಾಗರ ಚಿತ್ತ ಹಿಡಿದು ಮುಂದೆ ನಿಂತು ಕುಪ್ಪಮ್ಮನನ್ನು ನಾಳೆಯೇ ಲಗ್ನವಾಗುತ್ತೇನೆಂದು ಪತ್ರ ಬರಿ ಎಂದು ಗುಟುರು ಹಾಕಿದರು. ತೆಪ್ಪಗೆ ಬರೆದು ಕೊಟ್ಟ.

❦ ❦ ❦

ಮರುದಿನವೇ ಮಾತುಂಗದಲ್ಲೇ ಉಗ್ರಸೇನರಾಯರ ಅಣ್ಣನ ಮಗ ಭೀಮೋಜಿರಾಯರ ಕುಮಾರಿ ಸೌ|| ಕುಪ್ಪಮ್ಮನನ್ನು ಮ|| ರಾ|| ಗುಂಡೂರಾಯರಿಗೆ ಕೊಟ್ಟು, ವಿವಾಹ ಮಹೋತ್ಸವ ವಿಜೃಂಭಣೆಯಿಂದ ನಡೆಯಿತು.



# ಸ್ತ್ರೀ ಋಣ

ಅವತ್ತು ಭಾನುವಾರ. ಮುಂದಿನ ವಾರದ ಕಾರ್ಯಕಲಾಪಗಳ ವಿಷಯವಾಗಿ ಆಲೋಚಿಸುತ್ತಾ, ಹುರಿಗಾಳು ಮೆಲುಕುತ್ತಾ ಕುಳಿತಿದ್ದೆ. ಹೋದ ವಾರ ಮಾಮೂಲು ಬಹಳ ಕಡಿಮೆ ಬಂದಿದ್ದರಿಂದ ಈ ಕೆಟ್ಟ ಚಾಳಿ ಮುಂದಿನ ವಾರಕ್ಕೂ ಹರಡದೆ ಇರಲು ಗದರಿಸಬೇಕಾದ ಗುಮಾಸ್ತೆಗಳನ್ನು ಎಣಿಕೆ ಹಾಕುತ್ತಿದ್ದೆ. ನಾಯಿ ಒಂದೇ ಸಮನ ಬೊಗಳಲು ಪ್ರಾರಂಭಿಸಿತು. ಯಾರಾದರೂ ಗೇಟಿನ ಬಳಿ ಬಂದಿರಬಹುದೆಂದು ಹೋಗಿ ನೋಡಿದೆ. ಆತನನ್ನು ಹಿಂದೆಲ್ಲೋ ನೋಡಿದ ನೆನಪು ನಸುನಾಚಿ ಹಾಕಿದ ಗುಂಡಿಗಳನ್ನು ಮತ್ತೆ ಹಾಕಿಕೊಳ್ಳುತ್ತಾ, ತಲೆತಗ್ಗಿಸಿಕೊಂಡು "ನನನನಮಸ್ಕಾರ" ಎಂದು ತೊದಲಿದ ಆ ಮಹಾನುಭಾವ. ಯಥಾವತ್ತಾದ ಅಧಿಕಾರ ದರ್ಪದಿಂದ "ಏನ್ರಿ?" ಎಂದು ಹೇಳಲು ಬಾಯೇ ಬರಲಿಲ್ಲ. ಕಾರಣ ಜರಿಪೇಟ ತಲೆಯಮೇಲಿರಲಿಲ್ಲ, ಅಲ್ಲದೆ ಆ ಪ್ರಾಣಿಯ ಮೇಲೆ ದಬಾವಣೆ ಚಲಾಯಿಸಲು ಮನಸ್ಸೂ ಬರಲಿಲ್ಲ. ಅತಿ ವಿನಯದ ಮುದ್ದೆಯಿಂದ ಮಾಡಿದ ಮೂರ್ತಿ ಆ ವ್ಯಕ್ತಿ. "ಯಾರಪ್ಪ - ಏನು ಬಂದಿದ್ದು?" ಎಂದು ಕೇಳಿದೆ.

ಆ ಪ್ರಾಣಿ ಗಳಗಳನೆ ಕಣ್ಣೀರು ಹಾಕಿತು. "ಬಬಬಡವನ್ನ ಬದುಕಿಸ ಬೇಕು" ಎಂದು ಬಡಕೊಂಡಿತು. "ಏನಪ್ಪಾ ಒಳಕ್ಕೆ ಬಾ ಸುಧಾರಿಸ್ಕೊ ಏನ್ಸಮಾಚಾರ" ಎಂದು ಗೇಟ್ ಬಾಗಿಲು ತೆಗೆದು, ಬಡುಕೊಳ್ಳುತ್ತಿದ್ದ ನಾಯಿಗೆ ಗದುರಿಸಿ ಮತ್ತೆ ವರಾಂಡಕ್ಕೆ ಬಂದು ಆಸನಾಸೀನನಾದೆ. ಪಿಳ ಪಿಳನೆ ರೆಪ್ಪೆ ಹೊಡೆಯುತ್ತಾ – ತುಟಿಗಳೆರಡನ್ನೂ ಮುಚ್ಚಿ ಮುಂದೆ ಹಾಯಿ ಸಿಕೊಂಡು, ಪೆಪ್ಪರಮೆಂಟು ಕಿತ್ತುಕೊಂಡ ಮಸುಳೆಯಂತೆ, ಬಂದು ಒಂದು ಕೊನೆಯಲ್ಲಿ ಮುದುಡಿ ನಿಂತುಕೊಂಡ.

"ಏನಪ್ಪಾ ಸಮಾಚಾರ – ನನ್ನಿಂದ ಏನಾಗಬೇಕು" ಎಂದು ಮತ್ತೆ ಕೇಳಿದೆ.

ಪಾಪ ದುಃಖ ಉಕ್ಕಿ ಬಂತು – ತಡೆದು ತಡೆದು ಬಹು ಪ್ರಯಾಸ ದಿಂದ ಹೇಳಿದ "....ಬೇಪರ್ಸಿನ್ನ ಕೈ ಬಿಡಬಾರದು ಸ್ವಾಮಿ....ಎಲ್ಲಾ ನಿಮ್ಮ ಕೈಲಿದೆ" ಎಂದು. "ಅದೇನು ಹೇಳಪ್ಪ....ನೋಡೋಣ" ಎಂದೆ.

"....ನಮ್ಮಜ್ಜಿ ತೀರಿಕೊಂಡರು ಸಾರ್" ಎಂದ. ಬಹಳ ಕಷ್ಟದಿಂದ ವರಲಿದ. ನನಗೆ ಮರುಕ ಬಂದು, ರೂಮಿನೊಳಕ್ಕೆ ಕರೆದೊಯ್ದೆ. ಬಲ ವಂತದಿಂದ ಕೂಡಿಸಿದೆ. ಬಂದ ಸಮಾಚಾರವೇನೆಂದು ಮತ್ತೆ ವಿಚಾರಿಸಿದೆ. ಇದುವರೆಗೂ ಯಾರಿಗೂ ಇಷ್ಟು ಉಪಚಾರ ಮಾಡಿರಲಿಲ್ಲ. ಈ ಪೇತ್ರದ ಪ್ರಲಾಪಕ್ಕೆ ಕಾರಣವೇನೆಂದು ತಿಳಿಯುವ ಆತುರಕ್ಕೆ, ವಿಚಿತ್ರ ವ್ಯಕ್ತಿಯ ಚರಿತ್ರೆ ಏನು, ನನ್ನ ಹುಡುಕಿಕೊಂಡು ಯಾಕೆ ಬಂತು, ಎಂದು ವಿಚಾರಿಸಲು ಈ ಉಪಚಾರ ಮಾಡಿದೆ. ಆ ಸಾಮಿ ಪಿಟಕ್ಕನ್ನದೆ ಕಣ್ಣೀರುಡುತ್ತಿದ್ದ. ಮುದುಡಿಕೊಂಡು – ಕಾಲಹೆಬ್ಬಟ್ಟಿನಿಂದ ಜಂಖಾನೆ ಕೆರೆಯುತ್ತ ತಲೆ ತಗ್ಗಿಸಿ ಕುಳಿತವನ ಬಾಯಿ ಬಿಡಿಸಲು ನಾನು ಜರಿಪೇಟ ಹಾಕಲೇಬೇಕಾ ಯಿತು. ಅದನ್ನು ಹಾಕದ ಹೊರತು ನನಗೆ ದರ್ಪ, ದಬಾವಣೆ, ಬರುತ್ತಲೇ ಇರಲಿಲ್ಲ. ಜರಿ ಪೇಟ ಏರಿಸಿ "ಅದೇನು ನಿನ್ನ ಪುರಾಣ ಬೊಗುಳ್ತೀಯೋ ಇಲ್ಲಾ ಆಳನ್ನು ಕರೆಯಲೋ" ಎಂದು ಒಂದು ಗುಟರು ಹಾಕಿದೆ. ಆ ಸಾಮಿ ತಲ್ಲಣಿಸಿ ಹೋದ, ಬೆವತ, ಬಿಕ್ಕಿದ, ಬೆಂಡಾದ. "ಹೂಂ! ವದರು" ಎಂದು ಹೆದರಿಸಿ ಪೇಟ ತೆಗೆದು ಮೇಜಿನ ಮೇಲಿಟ್ಟೆ. ಅವನು ಹೇಳತೊಡಗಿದ. ಕೊಂಚ ಧೈರ್ಯ ಸಂಪಾದಿಸಿದ್ದ.

"....ನನ್ನ ಸಾಕಿದ್ದು ನಮ್ಮಜ್ಜಿ ಸಾರ್. ಬಹಳ ಮುದ್ದಾಗಿ ಸಾಕಿದಳು. ತಂದೆ ತಾಯಿಗಳಿಲ್ಲದ ತಬ್ಬಲಿ ಎಂದು ವಾರ ವಾರ ಎರೆದಳು. ಅಣ್ಣ ಎಂದು ಅವರೆ ಕಾಳು ಉಪ್ಪಿಟ್ಟು ಕೊಟ್ಟು ನನ್ನ ಸಾಕಿದಳು. ಜರತಾರಿ ಟೋಪಿ–ಮಕಮಲ್ ಕೋಟು ಕಾಲುಬಳೆ ಅವಲಕ್ಕಿ ಸರ ಹಾಕಿ ಆರತಿ ಮಾಡುತ್ತಿದ್ದಳು ನನ್ನ ಹದಿನೆಂಟನೆ ವರ್ಷದವರೆಗೆ. ಆ ಮೇಲೆ ಮೆಜಾರಿಟಿಗೆ ಬಂದೆನೆಂದು ಮಾರುತಿಗೆ ಮಂಗಳಾರತಿ ಮಾಡಿದಳು. ಮಸಾಲೆ ದೋಸೆ ಮೆಯಿಸಿದಳು. ಸಾಲಿಗೆ ಹಾಕಿದಳು. ಮೇಸ್ತ್ರು ಥಳಿಸಿದರು. ಸಲಾಂ ಹೊಡೆದುಬಿಟ್ಟೆ. ಸಾಲಿಗೆ ಜೊತೆಗಾರರ ಕೂಡಿ ಆಡಲು ಹೋಗಿ ಮೂಗು ಮುರಿದುಕೊಂಡೆ. ಅಜ್ಜಿಯೇ ಸ್ವತಃ ಮೂಗಿಗೆ ಮುಲಾಮು ಬಳಿದು ಬಟ್ಟೆ ಬಿಗಿದಳು. ನಮ್ಮಜ್ಜಿ ಮಿಡ್‌ವೈಫ್ ಆಗಿದ್ದಳು ಸಾರ್. 'ಮುದ್ದು ಮುಕುಂದಾ–ಮನೆಯ ಮಣಿ ಕಣೋ ಮರಿ' ಎಂದು ಪ್ರೀತಿಯಿಂದ ತಲೆ ಸವರುತ್ತಿದ್ದಳು ಆಕೆ. ಆ ಮಹಾನುಭಾವೆ.

"ಕಡೆ ತನಕಾ ಹೀಗೆ ಇರುತ್ತೆಂದು ಭಾವಿಸಿದ್ದೆ. ಆದರೆ ದೇವರ ಮನಸ್ಸಿಗೆ ಬರಲಿಲ್ಲ. ಅಜ್ಜಿ ನನಗೆ ಯಾರಮೇಲೆ ಪ್ರೀತಿಯೋ ಅವಳನ್ನೇ ಮದುವೆಯಾಗುವಂತೆ ಹೇಳಿದಳು. ಮೊದಲಿಂದಲೂ ನಾನು ಮುಂದಿನ ಮನೆಯ ಮಿನಾಕ್ಷಿಯನ್ನು ಕಂಡರೆ ನಾಚುತ್ತಿದ್ದೆ. ಅವಳೂ ಮಿಡ್ ವೈಫ್ ಟ್ರೈನಿಂಗಿಗೆ ಬಂದವಳು. ಅಜ್ಜಿಗೆ ಹೇಳಿದೆ. ಹೊರೆ ಸಂತೋಷದಿಂದ ದೊಡ್ಡ ತಾಳಿ ಮಾಡಿಸಿದಳು. ನನಗೆ ಸೂಟು ಹೊಲಿಸಿಕೊಟ್ಟಳು. ನನ್ನ ಕೈಲಿ ಮಿನಾಕ್ಷಿಗೆ ತಾಳಿ ಬಿಗಿಸಿದಳು. ಮಿನಾಕ್ಷಿ ನನ್ನ ಆ ಸಂಜೆ ಸಿನಿಮಾಕ್ಕೆ ಕರೆದುಕೊಂಡು ಹೋಗಿದ್ದಳು. ಬಹಳ ಗಂಡುಬೀರಿ ಅವಳು. ಬೀದಿಯಲ್ಲೆ ನನ್ನ ಕೈಹಿಡಿದುಕೊಂಡು ಹೊರಟುಬಿಡುತ್ತಿದ್ದಳು. ಅವಳಿಗೂ ನನ್ನ ಕಂಡರೆ ಪ್ರಾಣ."

ಎಂದು ಹೇಳಿ ಕಣ್ಣು ತುಂಬಾ ನೀರು ತುಂಬಿಕೊಂಡು ಕಂಠ ಉಬ್ಬಿಸಿಕೊಂಡು ಮುಂದೆ ಮಾತಾಡದೆ ಹೋದ. ಮತ್ತೆ ಜರಿಪೇಟ ಏರಿಸಿ ಗದರಿಸಿದೆ. ಉಗುಳು ನುಂಗಿಕೊಂಡು ಪ್ರಾರಂಭಿಸಿದ.

"....ಮೀನಾಕ್ಷಿಗೆ ಮಾಯಕೊಂಡಕ್ಕೆ ವರ್ಗವಾಯಿತು ಸಾರ್. ಅಜ್ಜೀನ್ನ ಬಿಟ್ಟು ಹೇಗೆ ಹೋಗಲಿ ಮಾಯಕೊಂಡಕ್ಕೆ? ಅಜ್ಜಿ ಸಮಾಧಾನ

ಹೇಳಿ ಕೈಗಿ ರೂಪಾಯಿ ಕೊಟ್ಟು ನೆತ್ತಿ ಮೂಸಿನೋಡಿ ರೈಲು ಹತ್ತಿಸಿದಳು. ಹುಟ್ಟಿದಂದಿನಿಂದ ಅಜ್ಜಿಯನ್ನು ಬಿಟ್ಟವನಲ್ಲ. ಬಹು ದುಃಖವಾಯಿತು. ಮಿನಾಕ್ಷಿ ಇರುತ್ತಾಳಲ್ಲ ಜೊತೆಗೆ ಎಂದುಕೊಂಡು ಅಳು ತಡೆದುಕೊಂಡೆ. ಆಗಿಂದಾಗ್ಗೆ ಅಜ್ಜಿ ಕಾಗದ ಬರೆಯುತ್ತಿದ್ದಳು....

"ಮಾಯಕೊಂಡದಲ್ಲಾದ ನನ್ನ ಗಾಯ ಮಾಯಲೇ ಇಲ್ಲ. ಮೀನಾಕ್ಷಿ 'ಹೆಣ್ಣು ಅನ್ನ ತಿಂದು ಮೈ ಬೆಳಸಿದವನೆ' ಎಂದು ಪ್ರಾರಂಭಿಸಿದಳು. ಆಗ ನನಗೆ ಎನಿಸಿತು. ಹೆಣ್ಣು ಅನ್ನ ತಿಂದು ಗಂಡಸ್ತನ ಕಳೆದುಕೊಂಡ ಗಂಡ್ಹೆಂಗಸಾಗಿ ಇರೋದಕ್ಕಿಂತ ಸಾಯೋದು ಮೇಲು ಎಂದು. ಕೂಡಲೆ ಅಜ್ಜಿಗೆ ಬರದೆ. ಹೊರಟು ಬಾ ಎಂದು ಅಜ್ಜಿ ಬರೆದಳು. ಹೊರಟೆ, ಮೀನಾಕ್ಷಿಗೆ ಸವಾಲು ಹಾಕಿ ಹೊರಟೆ. 'ನೀನು ದುಡಿದು ಹಾಕಿದ ಅನ್ನ ತಿಂದ ಮೈ ಕರಗಿಸಿ, ನಿನಗೆ ನನ್ನ ದುಡುಮೆ ಅನ್ನ ತಿನ್ನಿಸದಿದ್ದರೆ ಮುಕುಂದಯ್ಯನೇ ಅಲ್ಲ' ಎಂದು ಹೊರಟೆ, ಅವಳೂ ಸ್ಟೇಷನವರೆಗೂ ಬಂದು ಬೀಳ್ಕೊಟ್ಟಳು.' ರೈಲು ಹೊರಟಾಗ ಕಣ್ಣುಕುಡಿಯಲ್ಲಿನ ನೀರನ್ನು ಸೆರಗಿನಿಂದ ವರೆಸಿಕೊಂಡಳು. ರೈಲು ಹೋಗುತ್ತಲೇ ನಾನೂ ಬಿಕ್ಕಿ ಬಿಕ್ಕಿ ಅತ್ತೆ.... ಊರಿಗೆ ಬಂದು ಅಜ್ಜೀನ್ನ ನೋಡಿ ಮತ್ತೆ ಅತ್ತೆ. ಅಜ್ಜಿಗೆ ಸಕತ್ ಖಾಯಿಲೆ. ಮೀನಾಕ್ಷಿಗೆ ತಾರು ಕಳಿಸಿದೆ. ನನ್ನ ಅದೃಷ್ಟ ದೇವರೂ." ಎಂದು ಮತ್ತೆ ಸುಮ್ಮನಾದ. "ಆಮೇಲೇನಾಯಿತು ಹೇಳು" ಎಂದೆ.

"....ಅಜ್ಜಿ ತೀರಿಕೊಂಡ್ರು ಸಾರ್. ಸಾಯುವಾಗ ತನ್ನ ಇನ್ಷ್ಯೂರೆನ್ಸ್ ಎಲ್ಲಾ ನನಗೇ ಬರೆದುಹೋದಳು. 'ಮಗೂ ಮೊದಲೇ ನೀನು ಮೆದುಸ್ವಭಾವದವನು. ಇನ್ನು ಹೆಂಗಸು ದುಡಿದ ಅನ್ನ ತಿಂದರೆ ಗತಿ ಏನು .... ಈ ದುಡ್ನಲ್ಲಿ ಅಂಗಡಿ ಹಾಕ್ಕೊಂಡಿರು' ಎಂದು ಕಣ್ಣು ಮುಚ್ಚಿದಳು. ನಾನು ಅತ್ತೆ. ಮೀನಾಕ್ಷಿ ಸಮಾಧಾನಪಡಿಸಿದಳು. ...."

"ಸರಿ ಸರಿ . . . ಈಗ ಜ್ಞಾಪಕ ಬಂತು ದಿನಾಗಲೂ ನನ್ನ ಆಫೀಸ್ ಕಟ್ಟೆ ಮುಂದೆ ನಿಂತು ಸಲಾಂ ಮಾಡಿ ಹಲ್ಲುಗಿರಿಯುತ್ತಿದ್ದವನು ನೀನೇ ಅಲ್ವೆ?"

"ಹೌದು ಸಾರ್ . . . ಅಜ್ಜಿ ಸತ್ತು ಎರಡು ವರ್ಷ ಆಯ್ತು. . . . . ಇನ್ನೂ ಇನ್ಷ್ಯೂರೆನ್ಸ್ ಹಣ ಬರಲಿಲ್ಲ. ನಿಮ್ಮ ಗುಮಾಸ್ತೆಗಳಿಗೆಲ್ಲಾ

ಕೈ ಬೆಚ್ಚಗೆ ಮಾಡಲು ೧೫೦ ರೂ. ಸಾಲ ಬೇರೆ ತೆಗೆದಿದ್ದೇನೆ. ಇದು ಮೀನಾಕ್ಷಿಗೆ ಗೊತ್ತಿಲ್ಲ. ತಾವು ದಯಮಾಡಿ ನನ್ನ ಹಣ ಬೇಗ ಕೊಡಿಸ ಬೇಕು....ಸ್ವಾಮಿ" ಎಂದು ಹಾಕಿದ ಗುಂಡಿ ಮತ್ತೆ ಚಿವುಟಿಕೊಂಡು ತಲೆ ಬಗ್ಗಿಸಿದ. ನಾನು ಸುಮ್ಮನಿದ್ದೆ. ಇಂಥ ಗಿರಾಕಿಗಳಿದ್ದರೆ ಬರೋ ಮಾಮೂಲು ಯಾರ ಪಾಲೋ! ಅದಕ್ಕೇ ಹೋದ ವಾರ ಕಲೆಕ್ಷನ್ ಕಡಿಮೆ ಎಂದುಕೊಂಡೆ.

"ಬೇಗ ಹಣ ಬಂದರೆ...ಮೀನಾಕ್ಷಿಗೆ ಹಾಕಿದ ಸವಾಲು ಗೆದ್ದೇನು. ಇನ್ನು ತಡ ಆದರೆ—ನಾನು ಆ ಹೆಣ್ಣು ಅನ್ನ ತಿಂದು ತಿಂದು ಸೀರೆ ಉಡ ಬೇಕಾದೀತು..." ಎಂದು ನಾಚಿ ಬೆರಳು ಕಚ್ಚಿದ.

"ಸರಿ... ನಾಳೆ ಆಫೀಸ್ ಹತ್ರ ಬಾ ಏನಾದ್ರೂ ಮಾಡೋಣ" ಎಂದೆ.

"ನಮಸ್ಕಾರ" ಎಂದು ಹಲ್ಲುಗಿರಿದು—ವಿನಯವಾಗಿ ನಡೆದು ಹೋದ. ಬಾಗಿಲ ತನಕ ಹೋಗಿ ನೋಡಿದೆ. ಹೊರಗೆ ಕೊಡೆ ಹಿಡಿದು ಹೆಣ್ಣು ವ್ಯಕ್ತಿ ನಿಂತಿತ್ತು. ಮುಕುಂದರಾಯನನ್ನು ನೋಡಿ ನಕ್ಕು "ಏನಾಯ್ತು..." ಎಂದಿತು. "ಹಣ್ಣಾಯಿತು. ನಾಳೇನೆ ನೀನು ರಾಜಿನಾಮೆ ಕೊಟ್ಟು ಬಿಡು ಮೀನಾಕ್ಷಿ—ಎಲ್ಲಾ ನೀನು ಹೇಳಿಕೊಟ್ಟಹಾಗೇ ಹೇಳಿದೆ.... ನಾಳೆ ಸಿಕ್ಕುತ್ತೆ ದುಡ್ಡು" ಎಂದು ಹೇಳಿದ್ದು ಕೇಳಿಸಿತು. ಜರೀಪೇಟ ಹಾಕಿಕೊಂಡು "ಇಂಥವರನ್ನ ಸತಾಯಿಸಿದ ಆ ಗುಮಾಸ್ತೆ ಗುಂಡಾಬಾರೀನ್ನ ಡಿಸ್‌ಮಿಸ್" ಎಂದು ರೇಗಿದೆ. ಮತ್ತೆ ಪೇಟ ತೆಗೆದು ಊಟಕ್ಕೆ ಹೋದೆ. ನಗು ಬಂತು ಆ ಇನ್ಸ್ಯೂರೆನ್ಸ್ ದುಡ್ಡೊ ಹೆಂಗಸೇ ಸಂಪಾದಿಸಿದ್ದಲ್ಲವೆ? ಎಂದು.



# ಧನೋಹರ



ದೇವರು ಕಣ್ಣುಬಿಟ್ಟು ನೋಡಿದ್ದರಿಂದಲೇ ಮಹಾಯುದ್ಧ ಪ್ರಾರಂಭವಾದದ್ದು. ಕೇವಲ ಕೆಲವೇ ರೂಪಾಯಿಗಳಿಂದ ತುತ್ತಿನ ಚೀಲ ತುಂಬುತ್ತಿದ್ದ ಗುಮಾಸ್ತೆ ಗರುಡಾಚಾರಿ, ಮನೆಯಿಂದ ಗೋಣೀಚೀಲ ತಂದು ತುಂಬಿಕೊಂಡು ಹೋಗುವ ಸ್ಥಿತಿಗೆ ಬಂದ. ಯಾವುದೋ ಪರ್ ಮಿಟ್ ಕೊಡುವ ಕ್ಲಾರ್ಕು ಗರುಡಾಚಾರಿ. ಒಂದೊಂದು ಪರ್ಮಿಟ್ಟು ಸಾಹೇಬರಿಂದ ಸಹಿ ಆಗಬೇಕಾದರೂ ಪರ್ಮಿಟ್ಟು ಬೇಕಾದವರು ಗರುಡಾಚಾರಿಯ ಚೀಲಕ್ಕೆ ಮಾಮೂಲಾಗಿ ಇಷ್ಟೊಂತ ತುಂಬಲೇ ಬೇಕಾಗಿತ್ತು. ದಿನಕ್ಕೆ ಹತ್ತಾರು ಪರ್ಮಿಟ್ಟುಗಳನ್ನು ಸಹಿ ಹಾಕಿಸುತ್ತಿದ್ದ.

ಮುತ್ತಿನಂತಹ ಮಗಳೊಬ್ಬಳು, ಮೂರು ಜನ ಗಂಡು ಮಕ್ಕಳು. ಅಲಮೇಲಮ್ಮ ಕೈಹಿಡಿದ ಕಣ್ಮಣಿ. ಹೀಗೆ ಅವರ ಸಂಸಾರ. ದಿನದಿನಕ್ಕೆ ಹಣ ಕೂಡಿಬಂತು. ಆಸಾಮಿ ಪ್ರಬಲಿಸಿದ.

ಯುದ್ಧ ಮುಗಿಯಿತು. ಮತ್ತೆ ಗರುಡಾಚಾರಿಗೆ ತನ್ನ ಹಿಂದಿನ ಸ್ಥಿತಿ ನೆನೆಪಿಗೆ ಬಂತು. ಜಾಣತನದಿಂದ ಇರದಿದ್ದರೆ, ಮತ್ತೆ ಸಾಲವೆಂಬ

ಶೂಲಕ್ಕೇರಬೇಕಾಗುತ್ತದೆಂದು— ಇದ್ದ ಚಿನ್ನದ ಒಡವೆ ವಸ್ತ್ರಗಳನ್ನು ರೂಪಾಯಿಗಳಾಗಿ ಮಾಡಿ, ಚಿಕ್ಕದಾಗಿ ಲೇವಾದೇವಿ ಪ್ರಾರಂಭಿಸಿದ. ಹೆಚ್ಚು ಬಡ್ಡಿ ಹಾಕದೆ ಇದ್ದ ದುಡ್ಡನ್ನೇ ಬೆಳಸಬೇಕೆಂದು, ಆಸಾಮಿಯನ್ನು ನೋಡಿ ಅಸಲಿಗೇ ಮೋಸ ಬರುವಂತಾಗಬಾರದೆಂದು ಮೊದಮೊದಲು ಗುರುತಿನವರಿಗೇ ನೂರು ಇನ್ನೂರು ಕೊಡಲು ಪ್ರಾರಂಭಿಸಿದ. ಬಡ್ಡಿ ಬರುವುದು ತಡವಾದರೆ ಪರಿತಪಿಸುವಂತಾಗುತ್ತಿತ್ತು. ಬಡ್ಡಿ ಸಲೀಸಾಗಿ ಬಂದರೆ ಸಾಕೆನಿಸುತ್ತಿತ್ತು.

ದಿನಗಳುರುಳಿದಂತೆ ಆಸೆ ಬಹಳವಾಯಿತು. ಕಾಸಿಗೆ ಕಾಸು ಸೇರಿಸಿದ. ಜಿಪುಣತನ ಮೈಯ್ಯಲ್ಲಿ ಮನೆಮಾಡಿಕೊಂಡಿತು. ಕೆಲಸದಿಂದಲೂ ನಿವೃತ್ತಿಯಾಯಿತು, ಅಂದಮೇಲೆ ಕೈ ಹೇಗೆ ಬೆಚ್ಚಗಾಗಬೇಕು? ಲೇವಾದೇವಿಯೇನೋ ಹಾಗೂ ಹೀಗೂ ನಡೆಯುತ್ತಿತ್ತು.

ಬಡವರನ್ನು ಸತಾಯಿಸಿದರೆ ದೇವರು ಸಹಿಸೋದಿಲ್ಲ. ರಾಮಾಚಾರಿ ಕೊಡಬೇಕಾದ ಸಾಲಾ ಬಡ್ಡಿ ಸಮೇತ ಸಕಾಲಕ್ಕೆ ಕೊಡಲಿಲ್ಲವೆಂದು ಕೋರ್ಟಿಗೆ ಹೋಗಿ ಮನೆ ಹರಾಜಿನತನಕ ತಂದುಬಿಟ್ಟಿದ್ದ ಗರುಡಾಚಾರಿ. ಅಪ್ಪಣ್ಣಯ್ಯಂಗಾರಿ ಮಗನಿಗೆ ಮಗಳನ್ನು ಕೊಡಬೇಕೆಂದು ಏರ್ಪಾಟಾಗಿತ್ತು. ಕೊಟ್ಟ ಸಾಲಕ್ಕೂ ವರದಕ್ಷಿಣೆಗೂ ಮುರಿ ಹಾಕ್ಕೋಳಯ್ಯಾ ಎಂದು ಅಂಗಲಾಚಿದ ಅಪ್ಪಣ್ಣ. ಉಹೂಂ ಒಪ್ಪಲಿಲ್ಲ ಆಸಾಮಿ, ಲೇವಾದೇವಿಗೂ ಇದಕ್ಕೂ ಸಂಬಂಧ ಕಲ್ಪಿಸಕೂಡದೆಂದೂ ವರದಕ್ಷಿಣೆ ಪದ್ಧತಿ ಮಹಾ ಕೆಟ್ಟದ್ದೆಂದೂ ಹೇಳಲಿಕ್ಕೆ ಹೋದ. ಕಡೆಗೆ ಅಪ್ಪಣ್ಣಯ್ಯಂಗಾರಿ ಮೇಲ್ಕೋಟೆ ಹೆಣ್ಣು ತಂದುಕೊಂಡ. ಈ ಕಾರಣದಿಂದ ಅಪ್ಪಣ್ಣಯ್ಯಂಗಾರಿ ಮಗನ ಮದುವೆಗೆ ಹೊರಡುವ ಸಮಯದಲ್ಲಿ ವಾರೆಂಟು ತರಿಸಿ ಅಡಚಣೆ ಪಡಿಸಿದ್ದ. ಶುದ್ಧ ಹಲ್ಕ ಆಸಾಮಿಯಂತೆ ಗರುಡಾಚಾರಿಯ ಚರ್ಯೆ, ಮನಸ್ಸು, ಎಲ್ಲಾ ಪರಿವರ್ತಿತವಾಗಿಹೋಯಿತು. ಧನಪಿಶಾಚಿಯೇ ಅವನಿಗೆ ಹಿಡಿಯಿತು. "ಮುದುಕ ಹೋಗ್ತಾ ತೊಗೊಂಡು ಹೋಗ್ತಾನಾ........ಇರೋವರಗೂ ಹಾಯಂತ ಇರಕೂಡದಾ?" ಎಂದು ಜನ ಆಡಿಕೊಳ್ಳಲು ಪ್ರಾರಂಭಿಸಿದರು.

ಕಾಲ ಬದಲಾಯಿಸಿತು. ಬಹಳ ಬಡ್ಡಿ ಆಸೆಯಿಂದ ಇದ್ದ ದುಡ್ಡನ್ನೆಲ್ಲಾ

ಲೇವಾದೇವಿ ಮೇಲೆ ಹಾಕಿದ. ಐದಾರು ಅಸಾಮಿಗಳು ಪಾಪರ್‌ಚೀಟಿ ಪಡೆದರು—ಒಂದಿಬ್ಬರು ಓಡಿಹೋದರು—ಮತ್ತೆ ಕೆಲವರು ಇವನ ಕಾಟ ತಡೆಯಲಾರದೆ ನೇಣು ಹಾಕಿಕೊಂಡರು—ಕೆಲವರು "ಜೈ ಜೈ" ಎಂದು ಜೈಲು ಸೇರಿದರು. ಹೀಗಾಗಿ ಅವರ ಇಡೀ ಆಸ್ತಿಯೇ ಮುಳುಗಿ ಹೋಯಿತು.

"ಹೇಗೆ ಬಂತೋ ಹಾಗೇ ಹೋಯಿತು" ಎಂದು ಅಪ್ಪಣ್ಣಯ್ಯಂಗಾರಿ ಹೇಳತೊಡಗಿದ. ರಾಮಾಚಾರಿ 'ಹಾಗೇ ಆಗಬೇಕು ಬಡ್ಡೀಮಗನಿಗೆ' ಎಂದು ಪ್ರಾರಂಭಿಸಿದ.

ಗರುಡಾಚಾರಿ ಎದೆಗುಂದಲಿಲ್ಲ. ಮುತ್ತಿನಂತಹ ಮೂರು ಗಂಡು ಮಕ್ಕಳೇ ತನ್ನ ಆಸ್ತಿಯೆಂದ. ಬರುವ ಪಿಂಚಣಿಯೇ ಗತಿಯಾಯಿತು. ಅವನ ಮಕ್ಕಳೋ ಬಹು ಷೋಕಿವಂತರು. ಹಿರಿಯವನನ್ನು ರೈಲಿನಲ್ಲಿ ಕೆಲಸಕ್ಕೆ ಹಾಕಬೇಕೆಂದು ವಿಶ್ವಪ್ರಯತ್ನ ಮಾಡಿದರೂ ಸಿಕ್ಕಿದ್ದು ಸ್ಕೂಲು ಮಾಸ್ತರ ಕೆಲಸವೇ. ಆದರೂ ಅವನ ಬೆಲೆ ೩೦೦೦ ರೂ.ಗೆ ಕಡಿಮೆ ಇಲ್ಲ ವೆಂದು ಗರುಡಾಚಾರಿಯ ಅಭಿಪ್ರಾಯ. ಅದಕ್ಕೆ ಒಂದು ಕಾಸೂ ಕಡಿಮೆಗೆ ಕೊಡುವುದಿಲ್ಲವೆಂದು ಹಟ ಹಿಡಿದಿದ್ದ. ಮೂವರು ಮಕ್ಕಳಿಂದ ತಲಾ ಮೂರು ಮೂರು ಸಾವಿರವಾದರೂ ಒಂಭತ್ತು ಸಾವಿರಕ್ಕೆ ಕಡಿಮೆ ಇಲ್ಲದೆ ವರದಕ್ಷಿಣೆ ಬಂದು ಸೇರುತ್ತದೆ. ಇದರಲ್ಲಿ ಮಗಳ ಮದುವೆಗಾಗಿ ಒಂದು ಸಾವಿರ ಕಳೆದರೂ ಎಂಟು ಸಾವಿರ ಗಟ್ಟಿ. ಇದನ್ನು ಯೋಗ್ಯರಾದ ಗಿರಾಕಿ ಗಳಿಗೆ ಬಡ್ಡಿಗೆ ಕೊಟ್ಟು ಎಂಭತ್ತು ಸಾವಿರ ಮಾಡಬಹುದೆಂದು ಎಣಿಕೆ ಹಾಕಿದ್ದ.

ಎಷ್ಟೋ ಕನ್ಯೆಗಳು ಬಂದವು ಹೋದವು—ಈ ವರಗಳ ಬೆಲೆ ಬಹಳ ವಾದ್ದರಿಂದ ಬಂದವರೆಲ್ಲಾ ಹಿಂದಿರುಗುತ್ತಿದ್ದರು.

ದಿನದಿನಕ್ಕೆ ಹುಡುಗಿಗೂ ವಯಸ್ಸಾಗುತ್ತಾ ಬಂತು. ಗಂಡು ಹುಡು ಗರ ಮದುವೆ ಎಷ್ಟು ದಿನವಾದರೂ ತಡೆಯಬಹುದು. ಹೆಣ್ಣು ಮಕ್ಕಳನ್ನು ಮದುವೆ ಇಲ್ಲದೆ ಎಷ್ಟು ದಿನವೆಂದು ಮನೆಯಲ್ಲಿಟ್ಟುಕೊಳ್ಳಲು ಸಾಧ್ಯ?

ಕಡೆಗೆ ಗರುಡಾಚಾರ್ಯರೇ ಸಾಲಕ್ಕೆ ಹೋಗಬೇಕಾಯಿತು. ಕಾರಣ ಗಂಡು ಹುಡುಗರಿಗೆ ಸರಿಯಾದ ಗಿರಾಕಿ ಸಿಕ್ಕಲಿಲ್ಲ, ಮಗಳಿಗೆ

ಸುಲಭ ಬೆಲೆಯಲ್ಲಿ ಒಂದು ಗಂಡು ಹುಡುಕಿ ತಂದಿದ್ದರು. ಕೇವಲ ೫೦೦ ರೂಪಾಯಿಗೇ ಒಂದು ವರ ಸಿಕ್ಕಿತು.

ಅಪ್ಪಣ್ಣಯ್ಯಂಗಾರಿಗೆ ಲಾಟರಿಯಲ್ಲಿ ಎರಡು ಸಾವಿರ ರೂಪಾಯಿ ಬಂದಿತ್ತು. ಅವನ ಬಳಿಯೇ ಸಾವಿರ ರೂ. ಸಾಲ ತೆಗೆದರು. ಬಡ್ಡಿ ಬಹಳ ಕಡಿಮೆ ಹಾಕಿದ್ದ ಅಪ್ಪಣ್ಣಯ್ಯಂಗಾರಿ.

ಲಂಚಹೊಡೆದದ್ದರಿಂದಲೇ ಈ ಕಷ್ಟಕ್ಕೀಡಾಗಿ ಪರಿತಪಿಸುವಂತಾಯಿತೆಂದು ರಾಮಾಚಾರಿ ಬಾಯಿಬಿಟ್ಟು ಹೇಳಿಬಿಟ್ಟ. ಮಗಳಿಗೆ ಮಾಲೆ ಹಾಕಿದ ಅಳಿಯದೇವರು ಬಂದ ೫೦೦ ರೂಪಾಯಿ ಬ್ಯಾಂಕಿಗೆ ಹಾಕಿ, ಮಾವನ ಮನೆಯಲ್ಲೇ ಠಿಕಾಣಿ ಹಾಕಿದ್ದ.

ಹಿರಿಯ ಹುಡುಗ ಎಷ್ಟುದಿನವೆಂದು ಮದುವೆ ಇಲ್ಲದೇ ಇದ್ದಾನು? ಅವನು ಸ್ಕೂಲ್ ಮೇಸ್ಟ್ರು. ಗರ್ಲ್ಸ್ ಸ್ಕೂಲಿನ ಮಿಸ್ಟ್ರೆಸ್ ಮಿಸ್ ಮಧುರಂಳನ್ನು ಕೂಡಿಕೆಯಾಗಿ ಅವನೂ ಅವಳೂ ಇಬ್ಬರೂ ಗರುಡಾಚಾರ್ಯರ ಮನೆಯಲ್ಲೇ ಇರತೊಡಗಿದರು.

ಜನಗಳೆಲ್ಲಾ "ಧನೋಹರ ಗರುಡಾಚಾರ್" ಎಂದು ಕರೆಯುತ್ತಾರೆ. ಪಾಪ ಮುದುಕ ಇನ್ನೂ ಉಳಿದೆರೆಡು ಮಕ್ಕಳಿಂದ ಆರು ಸಾವಿರಕ್ಕೆ ಕಾಯುತ್ತಿದ್ದಾನೆ. ಅವರೋ ದೊರೆಸಾನಿಗಳನ್ನು ನೋಡುತ್ತಾ ತಿರುಗುತ್ತಿದ್ದಾರೆ. ಸಾಯುವುದರಲ್ಲೇ ಧನೋಹರ ಗರುಡಾಚಾರ್ರಿಗೆ ಹುಚ್ಚು ಹಿಡಿಯದಿದ್ದರೆ ಕೈಹಿಡಿದಾಕೆಯ ಪುಣ್ಯ.

ಈಗಲೂ ಸದಾ ಎಣಿಕೆ ಹಾಕುತ್ತಲೇ ತಿರುಗುತ್ತಿರುತ್ತಾರೆ ಗರುಡಾಚಾರ್ರು—ರಾಮಾಚಾರಿ ಸಿಕ್ಕರೆ ಲಂಚ ಹೊಡಿಬೇಡ್ರಿ ಅಂತಾನೆ.

ಅವರು ಮಾತ್ರ...."ಅರಕಲಗೂಡಿನವರು ಬಂದಿದ್ದರು. ೩೦೦೦ ಕ್ಕೆ ಕಡಿಮೆ ಇಲ್ಲಾ ಎಂದೆ" ಎಂದು ಹೇಳುತ್ತಾ ಇರುತ್ತಾರೆ. ಸದಾ ಎಣಿಸುತ್ತಾ ಇರುತ್ತಾರೆ. ಹುಚ್ಚು ಹಿಡಿಯಿತೋ ಏನೋ ಆ ಪರಾತ್ಪರ ಸ್ವರೂಪನೇ ಬಲ್ಲ.



# ಪ್ರೇತ ಸಂಹಾರ



ಆ ಮನೆ ಊರ ಮಧ್ಯೆ ಇದ್ದರೂ, ಹೆಚ್ಚು ಜನಸಂದಣಿಯ ಪ್ರದೇಶದಲ್ಲಿದ್ದರೂ ದಿಕ್ಕಿಲ್ಲದ ಪರದೇಶಿಯಂತಾಗಿ ಬಿಟ್ಟಿತ್ತು. ಇಕ್ಕಿದ ಬಾಗಿಲು ತೆರೆದು ನೋಡುವ ಧೈರ್ಯ ಯಾರಿಗೂ ಇರಲಿಲ್ಲ. ಅದು ದೆವ್ವದ ಮನೆ. ಅಪ್ಪಣ್ಣಶೆಟ್ಟರ ತಂದೆ ಸಾವಿರಾರು ರೂಪಾಯಿ ಖರ್ಚು ಮಾಡಿ ಕಟ್ಟಿಸಿದ ಮನೆಯನ್ನು ಆರಿಸಿ, ಬಂದು ಸೇರಿಕೊಂಡಿತ್ತು. ಅಮಾವಾಸ್ಯೆ ದಿನ ರಾತ್ರಿ ಹನ್ನೆರಡು ಗಂಟೆ ಹೊತ್ತಿನಲ್ಲಿ ಆ ಮನೆಯಿಂದ ಸುರುಗಿ ಹೂವಿನ ವಾಸನೆ, ಗೆಜ್ಜೆ ಶಬ್ದ, ಒಳ್ಳೆ ಸಂಗೀತ, ಒಂದೊಂದು ಸಾರಿ ಅಳುವ ಶಬ್ದ ಕೇಳಿಬರುತ್ತೆ; ಹೀಗೆ ಆ ದೆವ್ವದ ಸಂಸಾರದ ಸುಖದುಃಖಗಳ ಅರಿವು ತೋರುತ್ತಿರುತ್ತದೆಂದು, ಆ ಮನೆ ಎದುರಿಗಿರುವ ಪೇಟೆ ಸೂರಪ್ಪ ಹೇಳಿದ್ದನ್ನು ಸ್ವತಃ ಕೇಳಿದ್ದೇನೆ. ಆ ಮನೆ ನೆನೆದರೆ ಮೈ ಜುಂ ಎನುತ್ತದೆ.

ದಿನವಹಿ ಬೆಳಗಿನಿಂದ ಸಂಜೆವರೆವಿಗೂ ಬಾಸಿದ್ ಅಂಗಡಿ ಕಟ್ಟೆಮೇಲೆ, ತಂಡ ತಂಡವಾಗಿ ಜನ ವಿರಾಮವಾದಾಗಲೆಲ್ಲಾ ಬೀಡಿ ಸೇದುತ್ತಾ ಹರಟೆ ಕೊಚ್ಚುವುದು, ಅನಾದಿಯಿಂದಲೂ ಬಂದ ಪದ್ಧತಿ.

ಮೋಜಪ್ಪಯ್ಯ ಮುಂಜಾನೆ ಎದ್ದು, ಚಹ ಬಸಿದು, ಬೀಡಿ ಕಚ್ಚಿ ಮಾತಿಗೆ ಕೂತನೆಂದರೆ, ಸಂಜೆವರೆಗೂ ಸೇರುವ ತಂಡಗಳಿಗೆಲ್ಲಾ ಅಧ್ಯಕ್ಷನಾಗಿಬಿಡುತ್ತಿದ್ದ. ಮಾತಿಗೆ ಮಾತು ಹತ್ತಿ ದಿನವಹೀ ದೆವ್ವದ ಮನೆ ಮಾತಿಗೆ ಬಂದು ಬಿಡುತ್ತಿತ್ತು. ಬಾಸೀದ್‌ಗೆ ಈ ದೆವ್ವದಲ್ಲಿ ಕೊಂಚವೂ ನಂಬಿಕೆ ಇಲ್ಲ. "ದೆವ್ವ ಇರ್ತಿದ್ರೆ ಜರ್ಮ್ನಿ ಅವನು ಅದನ್ನ ಕರ್ಕೊಂಡಿ ಲಡಾಯ್‌ಮೆ ಗೆಲಿತಿದ್ದ........ಅದೆಲ್ಲಾ ಸುಳ್ಳು" ಎಂದು ವಾದಿಸುತ್ತಿದ್ದ. ಮೋಜಪ್ಪಯ್ಯನಿಗೆ ದೆವ್ವ ಅಂದರೆ ಪ್ರಾಣವೇ ಹೋಗುತ್ತಿತ್ತು. ದೆವ್ವದ ವಿಚಾರ ಮಾತಾಡಿದಮೇಲಂತೂ ಎಲ್ಲರೂ ದೆವ್ವಗಳ ಹಾಗೆ ಅವನ ಕಣ್ಣಿಗೆ ಬೀಳುತ್ತಿದ್ದರು.

ಮೋಜಪ್ಪಯ್ಯನಿಗೆ ದೆವ್ವದಲ್ಲಿ ಬಹಳ ನಂಬಿಕೆ. ಹಂಪಾಪುರದ ಸೀನಪ್ಪನವರ ಮಗಳಿಗೆ ದೆವ್ವಹಿಡಿದು ಹದಿನಾರು ವರ್ಷದ ಹುಡುಗಿ ಹದಿನಾರು ಸೇರು ಅಕ್ಕಿ ಅನ್ನ ಈ ರೇಷನ್ ಕಾಲದಲ್ಲಿ ತಿಂದದ್ದು, ಸವಣೂರು ಜೋಯಿಸರ ಸೊಸೆಗೆ ಹೂಂ ಎಂದರೆ ಹಾಂ ಎಂದರೆ ಕಲ್ಲುಗಳು ಬಿದ್ದು ಕಾಡಿಸಿದ್ದು, ಎಲ್ಲಾ ವಿವರಗಳೂ ಅವನಿಗೆ ಗೊತ್ತಿದ್ದುವು. ಅಂತೇ ಆ ದೆವ್ವದ ಮನೆಕಡೆ ತಿರುಗಿ ಸಹ ನೋಡುತ್ತಿರಲಿಲ್ಲ. ಬಾಸೀದ್ ಬೇಕೆಂತ ಅದರ ವಿಷಯ ಎತ್ತಿ ಮೋಜಪ್ಪಯ್ಯನನ್ನು ಹೆದರಿಸುತ್ತಿದ್ದ.

ಒಂದು ದಿನ ಎಂದಿನಂತೆ ಮಾತಿಗೆ ಮಾತು ಬಂದು, ಅಮಾವಾಸ್ಯೆ ದಿನ ರಾತ್ರಿ ಹನ್ನೆರಡು ಗಂಟೆಗೆ ಆ ಮನೆಯ ನಡುಮನೆ ಹೊಸಲಿಗೆ ಮೊಳೆ ಹೊಡೆದು ಬಂದವರಿಗೆ ಐದುರೂಪಾಯಿ ಕೊಡುವುದೆಂದು ಹಟಕ್ಕೆ ನಿಂತರು. ಮಲ್ಲಣ್ಣನಿಗೂ ಬಾಸೀದ್‌ಗೂ ಮಾತು ಹತ್ತಿತು–ನಾಡಿದ್ದು ಅಮಾವಾಸ್ಯೆ.... ಗಂಡಸ್ತನ ಇದ್ದರೆ ಮೊಳೆಹೊಡೆದು ಬರುವಂತೆ ಪಂಥವಾಯಿತು. ಮೋಜಪ್ಪಯ್ಯ ಗಡಗಡ ನಡುಗಿದ "ಬೇಡ ಬಾಸೀದಣ್ಣ. ದೆವ್ವದ ಸಹವಾಸ" ಎಂದ. ಬಾಸೀದಗೆ ಈ ದೆವ್ವದಲ್ಲಿ ಕೊಂಚವೂ ನಂಬಿಕೆ ಬರಲಿಲ್ಲ. ಅವನು "ಏನಾಗ್ತದೆ ನೋಡೇ ಬಿಡಾನ" ಎಂದೆನ್ನುತ್ತಿದ್ದ. ಹೋದರೆ ಐದು ರೂಪಾಯಿ ತಾನೆ ಎನ್ನುವ ಸಮಾಧಾನ ಮಲ್ಲಣ್ಣನಿಗೆ. ಗೆದ್ದೇ ಗೆಲ್ಲುವೆನೆಂಬ ಧೈರ್ಯ ಬಾಸೀದ್‌ಗೆ. ಬಾಸೀದ್ ಆ ದೆವ್ವನ ಕೈಗೆ ಸಿಕ್ಕು ಸಾಯುತ್ತಾನಲ್ಲಾ, ಅಂಗಡಿ ಗತಿ ಏನು? ಎಂದು ಮೋಜಪ್ಪನ ಚಿಂತೆ. ಹಟಕ್ಕೆ

ಬಿದ್ದರೆ ಮನುಷ್ಯನಿಗೆ ಏನೂ ಗೊತ್ತಾಗುವುದಿಲ್ಲ. ಮುಂದಿನ ಅಮಾವಾಸ್ಯೆ ಬಾಸೀದ್ ಆ ಮನೆ ನಡುಮನೆ ಹೊಸಲಿಗೆ ಮೊಳೆ ಹೊಡೆಯಬೇಕು....!

ಸರಿ, ಅಮಾವಾಸ್ಯೆಯೂ ಬಂತು; ಬಾಸೀದ್ ಸಿದ್ಧನಾಗಿದ್ದ. ಒಳಗೊಳಗೇ ಅವನಿಗೊಂದು ಬಗೆಯ ಹೆದರಿಕೆ....ಅಷ್ಟು ಜಂಬ ಹೊಡೆದು 'ಇಲ್ಲ' ವೆಂದರೆ ಮಾನ ಸಾಸುವೆಯಷ್ಟಾಗುತ್ತದೆ. ದೇವರು ಮಾಡಿಸಿದ್ದಾಗಲಿ ಎನ್ನುವ ದಿಟ್ಟತನ ಅವನಲ್ಲಿ ತುಂಬಿತ್ತು. ಆದರೂ ಹೆದರಿಕೆ, ಒಳಗೊಳಗೆ ನಡುಗುತ್ತಿದ್ದ. ಮೇಲೆ ಧೈರ್ಯದ ಸೋಗು ಹಾಕಿದ್ದ. ಮೋಜಪ್ಪಯ್ಯ ಊರದೇವಿಗೆ ಕೋಳಿ ಹಾರಿ ಬಿಟ್ಟಿದ್ದ. 'ಬಾಸೀದ್ ನನ್ನ ಜೀವಗೆಳೆಯ, ಅವನನ್ನು ಉಳಿಸು.' ಎಂದು ಹರಕೆ ಹೊತ್ತಿದ್ದ. ಮಲ್ಲಣ್ಣನಿಗೂ ಒಂದು ಬಗೆಯ ಹೆದರಿಕೆ....'ಬೇಡ ಬಾಸೀದ್ ಈ ಹಟ. ಐದು ರೂಪಾಯಿ ಬೇಕಾದರೆ ಕೊಡುತ್ತೇನೆ' ಎಂದು ಹೇಳಬೇಕೆಂದಿದ್ದ. ಬಾಹ್ಯದಲ್ಲಿ ಜೂಜಾಟದ ಮನೋಭಾವ ತಾಳಿದ್ದ. 'ಬಾಸೀದ್‌ಗೆ ಏನಾಗುವುದೋ.... ಆ ದೆವ್ವ ಇವನನ್ನ ನುಂಗದೆ ಬಿಟ್ಟೀತೆ?' ಎಂಬ ಶಂಕೆ. 'ದೇವರಿದ್ದಾನೆ' ಎಂಬ ಸಮಾಧಾನ....ಎಲ್ಲಾ ಸೇರಿದ್ದುವು.

ರಾತ್ರಿ ಹನ್ನೊಂದು ಗಂಟೆ. ಎಲ್ಲರೂ ಪೇಟೆ ಸೂರಪ್ಪನವರ ಮನೆ ಬಳಿ ಸೇರಿದರು. ಬಾಸೀದ್ ಇನ್ನೂ ಬಂದಿರಲಿಲ್ಲ. A. R. P. ಗೋಸ್ಕರ ಎಲ್ಲಾ ದೀಪ ಆರಿಸಿದ್ದರು. ರಸ್ತೆಯಲ್ಲಿ ನಡೆಯಲೇ ಭಯ. ಇನ್ನು ಆ ಮನೆಯಲ್ಲಿ! ಅಬ್ಬಾ!....ಭಯಂಕರ ವಾತಾವರಣ. ಬಾಸೀದ್ ಬಂದ. ಮೋಜಪ್ಪಯ್ಯನನ್ನು ಏನು ಮಾಡಿದರೂ ಬಿಡದೆ ಎಳೆದುಕೊಂಡು ಬಂದಿದ್ದ. ಬಾಸೀದ್‌ಗಿಂತ ಅವನೇ ಬಹಳ ಹೆದರಿದ್ದ. ಮಲ್ಲಣ್ಣ....ಮುಸುಗುಹಾಕಿ ನಿಂತಿದ್ದ. ವಿಷಮಯ ಸಮೀಪಿಸುತ್ತಾ ಬಂತು. ಬಹಳ ಜನ ನೆರೆದಿದ್ದರು. ಇನ್ನೇನು ೧೨ ಗಂಟೆಗೆ ಕೊಂಚಬಿಟ್ಟಿದೆ....ಬಾಸೀದ್ ಕಂಕಣ ಬದ್ಧನಾದ.... ಅಲ್ಲಾನನ್ನು ಪ್ರಾರ್ಥಿಸಿದ....ಪಾಪ, ಮೋಜಪ್ಪಯ್ಯನ ಕಣ್ಣಲ್ಲಿ ನೀರು ಬಂದಿತ್ತು. ಬಾಸೀದ್ ಹೊರಟ....ಆ ಮನೆ ಸಮೀಪಿಸಿದ. ಒಂದು ಕೈಯ್ಯಲ್ಲಿ ಮೊಳೆ, ಇನ್ನೊಂದು ಕೈಯ್ಯಲ್ಲಿ ಸುತ್ತಿಗೆ ಇತ್ತು. ಗಡ್ಡ ನೆಟ್ಟಗೆ ನಿಂತಿತ್ತು. ಅವನು ಪ್ರೇತ ಸಂಹಾರಕ್ಕೆ ಹೊರಟ ದೇವತೆಯಂತೆ ಕಂಡ. ಠಣಕ್ಕನೆ ಮನೆಗಿಕ್ಕಿದ ಚಿಲಕದ ಸದ್ದು ಮಾತ್ರ ಕೇಳಿಸಿತು. ಕೊಂಚ ಹೊತ್ತಿನ ನಂತರ

ಒಳಬಾಗಿಲು ತೆಗೆದ ಕಿರ್ ಶಬ್ದವು ಇಡೀ ಊರನ್ನೇ ಭಯಪಡಿಸಿತು. ಮೋಜಪ್ಪಯ್ಯ ‘ ಅದು ದೆವ್ವದ ಕೂಗು ’ ಎಂದು ನಡುಗಿ ನುಡಿದ. ಅವರೆಲ್ಲ ಇಂಥ ಪಂದ್ಯ ಯಾತಕ್ಕೆ ಹೂಡಿದೆವೋ ಎಂದು ಬಹಳ ವ್ಯಥೆಪಟ್ಟರು. ಇಷ್ಟರಲ್ಲಿ ಆ ಮನೆಯಿಂದ ಧಡ್ ಧಡ್ ಎಂಬ ಶಬ್ದ ಹೊರಟಿತ್ತು.... “ಗೆದ್ದ ಸಾಬಿ. ಮಳೆ ಹೊಡಿತಿದ್ದಾನೆ” ಎಂದ ಮಲ್ಲಪ್ಪ .......ಕೊಂಚ ಸಮಯಾ ನಂತರ ಕೆಟ್ಟದನಿಯಿಂದ “ಅಯ್ಯಯ್ಯೋ....ಅಲ್ಲಾಗೆ, ಸತ್ತೇ” ಎಂಬ ಕೂಗು ಕೇಳಿಬಂತು. ಮೋಜಪ್ಪಯ್ಯ “ ಅಯ್ಯೋ ” ಎಂದು ಮೂರ್ಛೆಹೋದ. ಪೇಟೆ ಸೂರಪ್ಪನವರು “ ಹೀಗೇಂತ ನನಗೆ ಗೊತ್ತಿತ್ತು” ಎಂದುಸುರಿದರು.... ಮುಂದೆ ಹೋಗಲು ಎಲ್ಲರೂ ಹೆದರಿದರು. ಮತ್ತೆ ಆ ಮನೆಯಿಂದ ಬೆಳಗಿನವರೆಗೂ ಬಾಸೀದ್‌ನ ಧ್ವನಿ ಬರಲಿಲ್ಲ ...ಹೊರಗಿನವರೆಲ್ಲಾ ‘ ದೆವ್ವ ಹಿಡಿದು ಕಟ್ಟಿಹಾಕಿದೆ ’ ಎಂದು ತೀರ್ಮಾನಿಸಿದರು.

ಬೆಳಕು ಹರಿಯಿತು. ಜಾತ್ರೆಯಂತೆ ಜನ ನೆರೆದರು. ಆ ಮನೆ ಒಳಕ್ಕೆ ಹೋಗಲು ಎಲ್ಲರಿಗೂ ಭಯ. ಸುದ್ದಿ ಪೋಲೀಸರವರೆಗೂ ಮುಟ್ಟಿತು. ಸ್ವತಃ ಇನ್ಸ್‌ಪೆಕ್ಟರೇ ಬಂದರು. ಹೆದರಿದ ಆ ತಂಡಕ್ಕೆ ಹುರಿ ಮೀಸೆಯ ಹನುಮಂತರಾಯರು ಅಭಯಹಸ್ತ ನೀಡಿದರು. ಆದರೂ ಆ ಹುರಿಮೀಸೆಯ ಮರೆಯಲ್ಲಿ ಹೆದರಿಕೆ ಅಡಗಿತ್ತು. ದಫೇದಾರ್ ದೇರಣ್ಣನ ಕೈಗೆ ಗ್ಯಾಸ್‌ಲೈಟ್ ಕೊಟ್ಟು ಮುಂದೆ ಬಿಟ್ಟರು. ಎಲ್ಲರಿಗೂ ಮುಂದೆ ನುಗ್ಗಲು ಭಯ. ಮಲ್ಲಣ್ಣ ಮೋಜಪ್ಪಯ್ಯ ಹೊರಗೇ ಇದ್ದರು....ಗಾಂಜಾ ಅಂಗಡಿ ಗಜಾನನಯ್ಯ ಅವರಿಬ್ಬರನ್ನೂ ಎಳೆದುಕೊಂಡು ಒಳಹೊಕ್ಕ.... ಬಿಟ್ಟು ಬಹಳ ದಿನವಾದ ಮನೆ ಧೂಳು ಬಹಳ ಬಿದ್ದಿತ್ತು....ದೆವ್ವದ ಮನೆ ವಿಪರೀತ ಕತ್ತಲು.... ಅಷ್ಟೂ ಜನದ ಎದೆ ಬಡಿತದ ಧ್ವನಿ ಒಂದು ಬಿಟ್ಟು, ಇನ್ಯಾವ ಸದ್ದೂ ಕೇಳುತ್ತಿರಲಿಲ್ಲ. ದಫೇದಾರ್ ದೇರಣ್ಣ ಮುಂದಕ್ಕೆ ಹೆಜ್ಜೆ ಇಡಲಿಲ್ಲ. ದೀಪದ ಬೆಳಕು ನಡುಮನೆ ಹೊಸ್ತಿಲ ಬಳಿ ಬಿದ್ದಿದ್ದ ಉಸು ರಾಡುತ್ತಿದ್ದರೂ ಮೂರ್ಛೆ ಹೋಗಿದ್ದ ಬಾಸೀದ್ ಮೇಲೆ ಬಿದ್ದಿತ್ತು. ದೆವ್ವ ಕಣ್ಣಿಗೆ ಕಾಣಲೊಲ್ಲದು.... ಮುಂದೆ ನುಗ್ಗಿ ಪರೀಕ್ಷಿಸುವುದು ಹನುಮಂತ ರಾಯರ ಕೆಲಸ. ಆದರೆ ಧೈರ್ಯ ಯಾವ ಅಂಗಡೀಲಿ ಸಿಗುತ್ತದೆ? ಯಾರಿಗೂ ಏನು ಮಾಡಲೂ ತೋಚದು. ನಚ್ಚಿನ ಗೆಳೆಯನ ಸ್ಥಿತಿ ನೋಡಿ

ಮೋಜಪ್ಪಯ್ಯ ಬಿಕ್ಕಿ ಬಿಕ್ಕಿ ಅತ್ತ. ಅರ್ಧ ಗಂಟೆಯಾಯಿತು. ಏನೂ ಕಾರ್ಯ ಮುಂದೆ ಸಾಗಲಿಲ್ಲ. ಕಡೆಗೆ ಉದ್ದನೆ ಗಳು ಒಂದನ್ನು ತಂದು ದೂರದಿಂದ ಬಾಸೀದ್‌ನನ್ನು ಮೆಲ್ಲಗೆ ಅಲುಗಿಸಿದರು. ಕೂಡಲೆ ಅವನು "ಅಯ್ಯಯ್ಯೋ" ಎಂದು ಕೆಟ್ಟಧ್ವನಿಯಿಂದ ಕೂಗಿದ. ಕೊಂಚ ಹೊರಳಿದ. ಎಲ್ಲರೂ ಹಿಂದೆ ಸರಿದರು. ಯಾರೂ ಮುಂದೆ ಹೋಗಲಿಲ್ಲ. ಆದರೆ ಮೋಜಪ್ಪಯ್ಯನಿಗೆ ಸಹಿಸಲು ಆಗಲಿಲ್ಲ. ಬಾಲ್ಯಗೆಳೆಯ ದುಃಖ ತಡೆಯು ಲಾರದೆ, ಆದದ್ದು ಆಗಲೆಂದು "ಬಾಸೀವಣ್ಣ" ಎಂದು ಅಳುತ್ತ ಅವನು ಬಿದ್ದಿದ್ದ ಸ್ಥಳಕ್ಕೆ ಓಡಿಹೋಗಿ ಅವನ ಬಳಿ ಕುಳಿತ. ಅಂಜುಬುರುಕ ಗೆಳೆ ತನದ ಕಾವಿನಿಂದ ಧೈರ್ಯಶಾಲಿಯಾದ.... ದಿಟ್ಟಿಸಿ ನೋಡಿದ.... ಕಣ್ಣುಜ್ಜಿ ನೋಡಿದ....ಅದೇ ದೃಶ್ಯ....ನಗು ತಡೆಯಲಾಗಲಿಲ್ಲ. ಗಹಗಹಿಸಿ ನಕ್ಕ.... ಬಿದ್ದು ಬಿದ್ದು ನಕ್ಕ. ಅಲ್ಲಿದ್ದವರು ಮೋಜಪ್ಪಯ್ಯನಿಗೂ ದೆವ್ವ ಹಿಡಿಯಿ ತೆಂದು ಹೆದರಿದರು....ಕಡೆಗೆ ಹನುಮಂತರಾಯರು ಎಲ್ಲರನ್ನೂ ಹೊರಕ್ಕೆ ಕಳಿಸಿ ತಾವೂ ಹೊರಗೆ ಬಂದರು. ದೆವ್ವದ ಹಾವಳಿ ಮುಗಿಲು ಮುಟ್ಟಿ ತೆಂದು ಊರವರೆಲ್ಲಾ ಆಡಿಕೊಂಡರು........ಕೊಂಚ ಹೊತ್ತಾದನಂತರ ಬಾಸೀದ್‌ನ ಹೆಗಲ ಮೇಲೆ ಕೈಹಾಕಿಕೊಂಡು ನಗುತ್ತ ಮೋಜಪ್ಪಯ್ಯ ಆ ಮನೆಯಿಂದ ಹೊರಬಿದ್ದ....ಬಾಸೀದ್ ಕೂಡ ನಗುತ್ತಿದ್ದ. ಇದೊಂದೂ ಯಾರಿಗೂ ಅರ್ಥವಾಗಲಿಲ್ಲ. ಮೋಜಪ್ಪಯ್ಯ ದೆವ್ವ ಬಿಡಿಸಿದ ಕತೆ ಒಬ್ಬೊಬ್ಬರು ಒಂದೊಂದು ತರಹ ಹೇಳುತ್ತಾರೆ.

* * * *

ಯಾರಿಗೂ ಹೇಳಬೇಡವೆಂದು ನನ್ನೊಡನೆ ಅವನು ಹೇಳಿದ. ನೀವೂ ಯಾರ ಮುಂದೂ ಹೇಳಬೇಡಿ....ಬಾಸೀದ್ ಮೊಳೆ ಹೊಡೆಯುವಾಗ ತನ್ನ ಅಂಗಿ ತುದಿ ಸೇರಿಸಿಕೊಂಡು ಹೊಡೆದಿದ್ದ–ಎದ್ದು ಬರುವಾಗ ಎಳೆದಂತಾ ಯಿತು. ದೆವ್ವವೆಂದೇ ತಿಳಿದು ಕಿರುಚಿದನಂತೆ. ಮೋಜಪ್ಪಯ್ಯ ಹತ್ತಿರ ಹೋಗಿ ಮೊಳೆ ಕಿತ್ತು, ದೆವ್ವ ಬಿಡಿಸಿದ. ಆ ಮನೇಲಿ ಈಗ ಮೋಜಪ್ಪಯ್ಯ ವಾಸವಾಗಿದ್ದಾನೆ!



